# ಪುರಂದರದಾಸರು

## (ದೃಶ್ಯ)

ಲೇಖಕ: **ವರವಣಿ ರಾಜಾರಾವ್ ಬಿ. ಎ.**

ಮುನ್ನುಡಿಯ ಲೇಖಕರು

**ಶ್ರೀಯುತ ಚ. ವಾಸುದೇವಯ್ಯನವರು.**

ಕನ್ನಡ ಬಾಲಬೋಧೆ, ಆರ್ಯಕೀರ್ತಿ, ಭೀಷ್ಮಚರಿತೆ
ಮುಂತಾದ ಗ್ರಂಥಗಳ ಕರ್ತರು.



೧೯೨೯

**ಬೆಲೆ ೦—೮—೦**

ಶ್ರೀ

# ಪುರಂದರದಾಸರು

(ದೃಶ್ಯ)

ಲೇಖಕ: **ವರವಣಿ ರಾಜಾರಾವ್ ಬಿ. ಎ.**

ಮುನ್ನುಡಿಯು ಲೇಖಕರು

ಶ್ರೀಯುತ **ಚ. ವಾಸುದೇವಯ್ಯನವರು.**

ಕನ್ನಡ ಬಾಲಬೋಧೆ, ಆರ್ಯಕೀರ್ತಿ, ಭೀಷ್ಮಚರಿತ್ರೆ
ಮುಂತಾದ ಗ್ರಂಥಗಳ ಕರ್ತರು

**ಬೆಲೆ ೦—೮—೦**

# ಮುನ್ನುಡಿ

ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯಲು ಸಾಧನ ಹೀನ ನಾದ ನಾನು ತಕ್ಕವನಲ್ಲ. ಆದರೂ ಗ್ರಂಥಕರ್ತರಿಂದ ಪ್ರೇ ರಿತನಾಗಿ ಇದೇನು 'ದಯವೊ ಸಾಧನವೊ' ಎಂದು ಗ್ರಂಥ ವನ್ನು ಓದಿ ನಾನು ತಿಳಿದುಕೊಂಡಮಟ್ಟಿಗೆ ದಾಸರ ಧರ್ಮೋ ಪದೇಶವನ್ನು ಅರಿಕೆ ಮಾಡುತ್ತೇನೆ.

ಈ ನಾಟಕದಲ್ಲಿ ಗ್ರಂಥಕರ್ತರು ಅಪರೋಕ್ಷಜ್ಞಾನಿಗ ಳಾದ ಪುರಂದರದಾಸರ ಪೂರ್ವವೃತ್ತಾಂತವನ್ನು, ಮುಖ್ಯ ವಾಗಿ ಆ ದಾಸವರ್ಯರ ಧರ್ಮೋಪದೇಶ ಸಾರವನ್ನು ಪಾತ್ರಗಳ ಸಂವಾದ ರೂಪದಿಂದ ತಿಳಿಸಲು ಯತ್ನಿಸಿರುವರು. ನಾಟ ಕವು ಭಕ್ತಿರಸ ಪ್ರಚುರವಾಗಿರುವುದು. ಭಾಷೆಯು ಸುಲ ಲಿತವಾಗಿರುವುದು. ಆದಿರಸವು ಪ್ರಲೋಭನ ರೂಪವಾಗಿ ಕಾಣಿಸಿಕೊಂಡು ವೈರಾಗ್ಯದಲ್ಲಿ ಪರಿಸಮಾಪ್ತವಾಗುವುದು.

ಈ ಕೃತಿಯಲ್ಲಿ-ಸರ್ವಂ ವಸ್ತು ಭಯಾನ್ವಿತಂ ಭುವಿ ನೃಣಾಂ ವೈರಾಗ್ಯಮೇವಾ ಭಯಂ - ಎಂಬ ನೀತಿವಾಕ್ಯವನ್ನನುಸರಿಸಿ ವೈರಾಗ್ಯವನ್ನು ಆಶ್ರಯಿಸಿ ಮುಕ್ತಿಪಥವನ್ನು ಹಿಡಿದ ಪುರಂ ದರದಾಸರೇ ನಾಯಕರು. 'ಇದುಕ್ಷಣಿಕ ಭಾಗ್ಯ. ಭಗವಂ ತನ ಸೇವೆಯೆಂಬ ಶಾಶ್ವತ ಭಾಗ್ಯವನ್ನು ಕಳೆದುಕೊಳ್ಳದಂತೆ ಸತ್ಪುರುಷರು ಎಚ್ಚರಿಸಬೇಕೆಂಬುದೇ ನನ್ನ ಹಾರೈಕೆ' ಎಂದು ಪತಿಗೆ ಅನುರೂಪಳಾದ ದಾಸರ ಸಹಧರ್ಮಚಾರಿಣಿಯೇ ನಾಯಿಕೆ. ಆದರೆ ದಾಸರು ತಮ್ಮ ಸುಳಾದಿಯಲ್ಲಿ,—

ಭಾರತಮಲ್ಲ ಭೀಷ್ಮನೆಂದೆಂಬರು | ಭಾರತಮಲ್ಲ ಕರ್ಣ ನೆಂದೆಂಬರು | ಭಾರತಮಲ್ಲ ರಿಪರ್‍ಯಾರಕ್ಷ | ಭಾರತಮಲ್ಲ ಪುರಂದರವಿಠಲ ಗಡುಗಿನ ವೀರನಾರಾಯಣಸ್ವಾಮಿ ||

ಎಂದು ಹೇಳಿರುವುದರಿಂದ ಆ ಭಾಗವತರ ಇಷ್ಟದೈವವಾಗಿ ಅವರ ಜ್ಞಾನಶಕ್ತಿಗೂ, ಭಕ್ತವಾತ್ಸಲ್ಯಾದಿ ಸಕಲ ಕಲ್ಯಾಣ ಗುಣಗಳಿಗೂ ಏಕಾಧಾರವಾಗಿರುವ ಶ್ರೀಕೃಷ್ಣ ಪರಮಾತ್ಮನೇ ಈ ಕೃತಿಯ ನಾಯಕನೆಂದು ಭಾವಿಸುವುದರಲ್ಲಿ ಔಚಿತ್ಯವಿಲ್ಲ ದಿರಲಾರದು.

ವಾತ್ಸಲ್ಯಾದಭಯಪ್ರದಾನ ಸಮಯಾದಾರ್ತಾರ್ತಿ ನಿರ್ವಾ ಪಣಾತ್ | ಔದಾರ್ಯಾದಘಶೋಷಣಾದಗಣಿತಶ್ರೇಯಃ ಪದ ಪ್ರಾಪಣಾತ್ || ಸೇವ್ಯಃ ಶ್ರೀಪತಿರೇಕ ಏವ ಜಗತಾಮೇತ್ರ್ಯೈವ ಷಟ್ಸಾಕ್ಷಿಣಃ | ಪ್ರಹ್ಲಾದಶ್ಚ ವಿಭೀಷಣಶ್ಚ ಕರಿರಾಟ್ಪಾಂ ಚಾಲ್ಯಹಲ್ಯಾಧ್ರುವಃ.—

ಇತ್ಯಾದಿ ಪರಮಾತ್ಮನ ಕಲ್ಯಾಣಗುಣಗಳನ್ನೇ ದಾಸರು ತಮ್ಮ ಕೀರ್ತನೆಗಳಲ್ಲಿ ಕೊಂಡಾಡಿ ಅವಕ್ಕೆ ಸಾಕ್ಷಿಗಳನ್ನಾಗಿ ಪ್ರಹ್ಲಾದಾದಿಗಳನ್ನು ಕರೆದಿರುವುದರಿಂದ ಕೃಷ್ಣನೇ ನಾಯ ಕನಾಗಬಹುದಲ್ಲವೆ ?

ದಾಸರು ಪುರಂದರ ದುರ್ಗದಲ್ಲಿ ಹುಟ್ಟಿದರು. ಅವರು ಆಗರ್ಭ ಶ್ರೀಮಂತರಾಗಿ ಧನಾರ್ಜನೆಯೇ ತಮ್ಮ ಪರಮ ಪುರುಷಾರ್ಥವೆಂದೆಣಿಸುತ್ತಾ ತಮ್ಮ ಕಾಯಶಕ್ತಿ ಬುದ್ಧಿ ಶಕ್ತಿಗಳನ್ನು ದ್ರವ್ಯಸಂಪಾದನೆಗಾಗಿಯೇ ವಿನಿಯೋಗಿಸು ತ್ತಿದ್ದು ದಾನಧರ್ಮಗಳ ಗಂಧವನ್ನೇ ಕಾಣದವರಾಗಿ ದ್ದರು. ಬಹುಕಾಲ ಹೀಗಿರುತ್ತಿರಲಾಗಿ ಇದ್ದಕ್ಕಿದ್ದಂ ತೆಯೇ ಅವರ ಮನೋವೃತ್ತಿಯು ಪರಿವರ್ತಿತವಾಯಿತು. ಅವರು ಮೊದಲು ಎಷ್ಟು ಲೋಭಿಗಳೆಂದು ಖ್ಯಾತರಾಗಿ ದ್ದರೋ ಈಗ ಅಷ್ಟು ತ್ಯಾಗಿಗಳಾಗಿ ತಮ್ಮ ಸರ್ವಸ್ವವನ್ನೂ ದಾನ ಮಾಡಿ—ಭಕ್ತಿಂ ದೇಹಿ, ವಿರಕ್ತಿಂ ದೇಹಿ | ಜ್ಞಾನಂ ದೇಹಿ ಪುರಂದರವಿಠಲಾ || ಎಂದು ಪಾಡುತ್ತಾ ಮೋಕ್ಷಾ ರ್ಥಿಗಳಾದರು – ' ಗುರುವಿನ ಗುಲಾಮನಾಗುವತನಕ ದೊರೆ

ಯೊದ್ಣ ಮುಕುತಿ' ಎಂದು ಶ್ರೀಮಧ್ವ ಸಿದ್ಧಾಂತವನ್ನು ಉದ್ಧರಿಸಿದ ಶ್ರೀ ವ್ಯಾಸರಾಯರನ್ನು ಗುರುಗಳನ್ನಾಗಿ ವರಿಸಿದರ. 'ಗುರು ವ್ಯಾಸರಾಯರೇ ಕರುಣದಿಂದೆನಗೆ ವರ ಮಹಾ ಮಂತ್ರಗಳ ಉಪದೇಶಿಸಿದರು | ಪುರಂದರವಿಠಲನೇ ಪರನೆಂದರುಪಿ ದುರಿತ ಭಯವನೆಲ್ಲ ಪರಿಹರಿಸಿದರಾಗಿ ||' ದಾಸರು ಆ ಮುನಿವರ್ಯರಿಂದ ಪುರಂದರ ದಾಸರೆಂದು ನಾಮಾಂಕಿತರಾಗಿ ದಾಸತ್ವವನ್ನು ಕೈಕೊಂಡರು. ಕೂಡಲೆಯೇ ಅವರು ಹೆಂಡತಿ ಮಕ್ಕಳೊಡಗೊಂಡು ಪಂಢರಾಪುರಕ್ಕೆ ಹೋಗಿ ವಿಠಲಸ್ವಾಮಿಯ ಸೇವಾತತ್ಪರರಾಗಿ ಹಗಲಿರುಳೂ ಭಗವನ್ನಾಮ ಸಂಕೀರ್ತನದಲ್ಲಿ ಕಾಲಕ್ಷೇಪಮಾಡತೊಡಗಿದರು.

ಪಂಢರಾಪುರದಲ್ಲಿ 'ತನ್ನ ಜನನಿ ಜನಕರಲ್ಲಿ ಹರಿಯು ಅನುಮಾನವಿಲ್ಲದ'ರ್ಚಿಸುತ್ತಿದ್ದ ಪುಂಡರೀಕನೆಂಬ ಭಕ್ತನೊಬ್ಬನು ಅರ್ಪಿಸಿದ ಇಟ್ಟಿಗೆಯಮೇಲೆ ಶ್ರೀ ಕೃಷ್ಣನು ನಿಂತಿರುವುದರಿಂದ ಕ್ಷೇತ್ರನಿವಾಸಿಗಳೂ ದೂರ ದೇಶಗಳಿಂದ ಹೋಗುವ ಭಕ್ತಾದಿಗಳೂ ಕೃಷ್ಣನನ್ನು ವಿಠಲ ಅಥವಾ ವಿಠೋಬ ಎಂಬ ಹೆಸರಿನಿಂದ ಭಜಿಸುವರು. ಆ ಸ್ವಾಮಿಯನ್ನು ಪಾಂಡುರಂಗನೆಂದೂ ಕರೆಯುವುದುಂಟು. ಆ ದೇವಸ್ಥಾನದಲ್ಲಿ ಭಕ್ತರು ಸರ್ವದಾ ಸಂಕೀರ್ತನೆ ಮಾಡುತ್ತಿರುವುದರಿಂದಲೂ ವಿಠಲನು ವೇಣುನಾದ ಸುವಿನೋದನಾದುದರಿಂದಲೂ ವಿಠಲನನ್ನು ನಾದಬ್ರಹ್ಮನೆಂದು ಕರೆಯುವ ವಾಡಿಕೆಯೂ ಉಂಟು.

ಈ ಪಂಢರಾಪುರವು ಪ್ರಸಿದ್ಧಿಯಾದ ಪುಣ್ಯಕ್ಷೇತ್ರವು. ಕ್ರಿ.ಶ. ಹದಿಮೂರನೆಯ ಆ ಶತಮಾನದಲ್ಲಿ ದೇವಗಿರಿಯಲ್ಲಿ ಯಾದವ ರಾಜರು ಆಳುತ್ತಿರಲು ಜ್ಞಾನದೇವನೆಂಬ ಒಬ್ಬ ಸಾಧುವು ಸಂಸ್ಕೃತಭಾಷೆಯ ಜ್ಞಾನವಿಲ್ಲದ ಸರ್ವಜನ ಸಾಮಾನ್ಯಕ್ಕೂ ಭಕ್ತಿ ಮಾರ್ಗದಲ್ಲಿ ಪ್ರವೃತ್ತಿಯನ್ನು ಹುಟ್ಟಿಸುವ ಉದ್ದೇಶದಿಂದ ಭಗವದ್ಗೀತೆಗೆ ಮಹಾರಾಷ್ಟ್ರ ಭಾಷೆಯಲ್ಲಿ 'ಜ್ಞಾನೇಶ್ವರಿ'

ಎಂದು ಪ್ರಸಿದ್ಧವಾಗಿರುವ ವ್ಯಾಖ್ಯಾನವನ್ನು ಬರೆದನು. ಮಹಾರಾಷ್ಟ್ರ ದೇಶದಲ್ಲಿನ ಜನ ಸಾಮಾನ್ಯದಲ್ಲಿ ಧರ್ಮಪ್ರಚಾರ ಮಾಡಲೆಣಿಸಿ ಮೊತ್ತಮೊದಲು ದೇಶಭಾಷೆಯಲ್ಲಿ ಧರ್ಮಪ್ರತಿಪಾದಕ ಗ್ರಂಥವನ್ನು ರಚಿಸಿದಾತನು ಜ್ಞಾನದೇವನೆ. ಅವನು ಮೊದಲು ಬಹಿಷ್ಕೃತ ಬ್ರಾಹ್ಮಣನಾಗಿದ್ದು ತರುವಾಯ ಭಗವದ್ಭಕ್ತಿ ಮೂಲಕವಾಗಿ ಪವಿತ್ರನೆನಿಸಿಕೊಂಡು ಸಾಧುವರ್ಯನೆಂದು ಖ್ಯಾತನಾದನು. ಆ ಸಾಧುವಿನ ತರುವಾಯ ಅನೇಕಮಂದಿ ಸಾಧುಗಳು ಭಾಗವತಾದಿ ಪುರಾಣ ಗ್ರಂಥಗಳನ್ನು ಮಹಾರಾಷ್ಟ್ರ ಭಾಷೆಯಲ್ಲಿ ರಚಿಸಿ ಜ್ಞಾನದೇವನು ಆರಂಭಿಸಿದ ಕಾರ್ಯವನ್ನು ಮುಂದುವರಿಸಿದರು. ಆ ಸಾಧುಗಳ ಕೂಟವನ್ನೇ ಸಂತಮಂಡಲಿಯೆಂದು ಕರೆಯುವರು. ಅವರ ಉದ್ಯಮ ಪ್ರಭಾವದಿಂದ ಮಹಾರಾಷ್ಟ್ರದಲ್ಲಿ ಭಾಗವತ ಧರ್ಮವು ಪ್ರಚಾರಕ್ಕೆ ಬಂದಿತು.

ಆ ಸಾಧುಗಳು ನಿರ್ಮಲ ಚಿತ್ತರಾಗಿಯೂ ಸಚ್ಚರಿತ್ರರಾಗಿಯೂ ಇದ್ದರು; ಅನನ್ಯ ಭಕ್ತಿಯಿಂದ ವಿಠಲ ಸ್ವಾಮಿಯನ್ನು ಭಜಿಸುತ್ತಿದ್ದರು. ವಿಠಲಸ್ವಾಮಿಯ ಮಾಹಾತ್ಮ್ಯವನ್ನೂ ಸಾಧುಗಳ ಸಚ್ಚರಿತ್ರೆಯನ್ನೂ ಕೇಳಿ ಊರೂರುಗಳಿಂದಲೂ ವಿಠಲನ ದರ್ಶನವನ್ನೂ ಸಾಧುಗಳ ಸಂಗವನ್ನೂ ಬಯಸಿ ಜನರು ತಂಡತಂಡವಾಗಿ ಪಂಡರಪುರಕ್ಕೆ ಹೋಗಲಾರಂಭಿಸಿದರು.

ಕೃಪಾಳುರಕೃತೋದ್ರೋಹಿಸ್ತಿತಿಕ್ಷುಃಸರ್ವದೇಹಿನಾಮ್ ।
ಸತ್ಯಸಾರೋ ಅನವದ್ಯಾತ್ಮಾ ಸಮಃ ಸರ್ವೋಪಕಾರಕಃ ॥
ಕಾಮೈರಹತಧೀರ್ದಾಂತೋ ಮೃದುಃ ಶುಚಿರಕಿಂಚನಃ ।
ಅನೀಹೋ ಮಿತಭುಕ್ ಶಾಂತಃ ಸ್ಥಿರೋ ಮಚ್ಛರಣೋ ಮುನಿಃ ॥

ಅಪ್ರಮತ್ತೋ ಗಭೀರಾತ್ಮ ಧೃತಿಮಾನ್ ಜಿತಷಡ್ಗುಣಃ |
ಅಮಾನಿ ಮಾನದಃ ಕಲ್ಯೋ ಮೈತ್ರಃ ಕಾರುಣಿಕಃ ಕವಿಃ ||

ಇವೇ ಸಾಧುಗಳ ಲಕ್ಷಣಗಳು. ಇಂತಹವರ ಸಂಗ ದೊರೆತಲ್ಲಿ ಯಾವ ಪತಿತನು ಪಾವನನಾಗನು? ಯಾವ ಪಾಷಂಡನು ಭಗವದ್ಭಕ್ತನಾಗನು? 'ಸಾಧು ಸಜ್ಜನರ ಸಂಗತಿ ಒಂದು ಸ್ನಾನ | ಪುರಂದರ ವಿಠಲನ ಧ್ಯಾನ ಗಂಗಾಸ್ನಾನ ||' ವೆಂದು ದಾಸರು ಹೇಳಿರುವಂತೆ ತ್ರಿಕಾಲದಲ್ಲೂ ಶ್ರವಣ, ಕೀರ್ತನ, ಅರ್ಚನ, ವಂದನ ಎಂಬೀ ಭಜನಕಾರ್ಯದಲ್ಲಿ ನಿರತರಾಗಿದ್ದ ಸಜ್ಜನರ ಸಹವಾಸದಿಂದ ಬಹು ಜನರು, ದ್ವೇಷಾಸೂಯೆಗಳನ್ನು ತೊರೆದು, ಕಾಮ ಕ್ರೋಧಗಳನ್ನು ಬಿಟ್ಟು, ಭಗವದ್ಭಕ್ತಿಯನ್ನೂ, ಪರಸ್ಪರ ಪ್ರೇಮಭಾವವನ್ನೂ ಉಳ್ಳವರಾದರು. ಹೆಚ್ಚು ಮಾತೇಕೆ? ಅವರ ಉಪದೇಶ ಪ್ರಭಾವದಿಂದಲೂ ದೃಷ್ಟಾಂತದಿಂದಲೂ ಜನ ಸಮೂಹದಲ್ಲಿ ಒಂದು ನವಜೀವನಶಕ್ತಿ-ಆಧ್ಯಾತ್ಮಶಕ್ತಿ-ಉಂಟಾಯಿತು. ಆ ಶಕ್ತಿಯೇ ಮಹಾರಾಷ್ಟ್ರದ ಭವಿಷ್ಯದಭ್ಯುದಯಕ್ಕೆ ಕಾರಣವಾಯಿತು.

ಸಂತಮಂಡಲಿಯಿಂದ ಮಹಾರಾಷ್ಟ್ರದೇಶಕ್ಕೆ ಯಾವ ಉಪಕಾರವಾಯಿತೋ ಆ ಉಪಕಾರವು ಪುರಂದರ ದಾಸರಿಂದಲೂ ಅವರ ಶಿಷ್ಯ ಪ್ರಶಿಷ್ಯರಿಂದಲೂ ಕರ್ಣಾಟಕ ನಾಡಿಗೆ ಆಯಿತೆಂದು ಹೇಳಬಹುದು. ದಾಸಕೂಟವು ಸಂತಮಂಡಲಿಯ ನಾಮಾಂತರವೇ. ಪುರಂದರದಾಸರು ಕೀರ್ತನೆಗಳನ್ನೂ ಸುಳಾದಿಗಳನ್ನೂ ರಚಿಸಿ ಅವುಗಳ ಮೂಲಕವಾಗಿ ಕನ್ನಡಿಗರಿಗೆ ತತ್ತ್ವೋಪದೇಶವನ್ನೂ ನೀತಿಬೋಧೆಯನ್ನೂ ಮಾಡಲು ಪ್ರವರ್ತಿಸಿದವರಲ್ಲಿ ಅವರೇ ಅಗ್ರಗಾಮಿಗಳೆಂದು ಹೇಳಬಹುದು.

ದಾಸರು ತಮ್ಮ ಸರ್ವಸ್ವವನ್ನೂ ಪರಿತ್ಯಾಗಮಾಡಿ ಕೊರಳಲ್ಲಿ ತುಳಸಿಯಮಣಿ, ಕೈಯಲ್ಲಿ ತಂಬೂರಿ, ಕಾಲ್ಗಳಲ್ಲಿ ಗೋಪಾಳಬುಟ್ಟಿಯನ್ನು ಧರಿಸಿ—'ಬಡವರ ನಿಧಿಯೋ ಭಾಗವತರ

ಭಾಗ್ಯವೋ:' ಬಿಡೆ ನಿನ್ನ ದಾಸ್ಯದ ಪರಮ ಪದವಿಯನು, ಬಿಡೆ ಬಿಡೆ' ಎಂದು ಭಿಕ್ಷಾಟನದಿಂದ ಕುಟುಂಬಭರಣ ಮಾಡ ಹೊರಟರು.

ಹರಿ ನೀನೆನಗೆ ಒಲಿವಂತೆ ಮಾಡು | ಒಲಿದರೆ ತಿರಿವಂತೆ ಮಾಡು | ತಿರಿದರೆ ಆರೂ ನೀಡದಂತೆ ಮಾಡು | ಆರು ನೀಡಿದರೂ ಹೊಟ್ಟೆ ತುಂಬದಂತೆ ಮಾಡು | ಹೊಟ್ಟೆ ತುಂಬಿದರೆ ಬಟ್ಟೆ ದೊರೆಯದಂತೆ ಮಾಡು | ಬಟ್ಟೆ ದೊರೆತರೆ ಇಂಬು ದೊರೆಯದಂತೆ ಮಾಡು | ಇಂಬು ದೊರೆತರೆ ನಿನ್ನ ಪಾದಾರವಿಂದದಲಿ ಇಂಬುದೋರೋ ಪುರಂದರವಿಠಲಾ ||

ಹೀಗೆಂದು ವೈರಾಗ್ಯದ ಪರಮಾವಧಿಯನ್ನು ಸೇರಿ ಪುರಂದರವಿಠಲನ ಪಾದಾರವಿಂದದಲ್ಲಿ ಇಂಬನ್ನು ಬೇಡುತ್ತಿದ್ದರು. ಇಷ್ಟು ವಿರಕ್ತರಾದರೂ ಸಂಸಾರದಲ್ಲಿರುವುದೇ ಬಂಧನಕ್ಕೆ ಕಾರಣವಲ್ಲ, ಇಲ್ಲದಿರುವುದೇ ಮೋಕ್ಷಕ್ಕೆ ಸಾಧನವಲ್ಲ, ಆಸೆಯಿಲ್ಲದಿರುವುದೇ ಮೋಕ್ಷಕ್ಕೆ ಸಾಧನವೆಂದರಿತು—

ಈಸಬೇಕೂ | ಇದ್ದು ಜೈಸಬೇಕೂ | ಹೇಸಿಕೆಯ ಸಂಸಾರದಲಿ | ಆಸೆ ಲೇಸೂ ಇಲ್ಲದ ಹಾಗೆ ||

ಮತ್ತು—

ಇರಬೇಕು | ಇರದಿರಬೇಕು || ಸಂ | ಸಾರದಿ ಜನಕಾದಿ ರಾಜ ಋಷಿಗಳಂತೆ || ಮಿಥಿಲಾಪಟ್ಟಣವು ದಹಿಸಿತೆಂಬುದ ಕೇಳಿ | ಮಿಥಿಲೇಶ 'ಮಮಕಿಂಚನ್ನದಹ್ಯತಿ' ಎಂಬಂತೆ ಇರಬೇಕು ||

ಎಂದೀ ರೀತಿಯಲ್ಲಿ ಮಾಡಿದ ಉಪದೇಶವು, ಯೋಗೇಶ್ವರನಾದ ಶ್ರೀಕೃಷ್ಣನು ಕುರುಕ್ಷೇತ್ರದಲ್ಲಿ ನಿಂತು ಧನುರ್ಧಾರಿಯಾದ ಅರ್ಜುನನಿಗೆ,

"ಜಹಿಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ" ಎಂದು ಮಾಡಿದ ಉಪದೇಶದ ಪ್ರತಿಧ್ವನಿಯೇ.

ಸಂಸಾರವು ಕುರುಕ್ಷೇತ್ರ. ಮನುಷ್ಯನು ಕಾಮವೆಂಬ ಶತ್ರುವಿನ ಸಂಗಡ ಕಾದಾಡಿ ಜೈಸಬೇಕು. ನಾನು ನನ್ನ ದೆಂಬ ಅಹಂಕಾರ ಮಮಕಾರಗಳನ್ನು ತೊರೆದು ಭಗವಂತ ನಿಗೆ ದಾಸನಾಗುವುದೇ ಕಾಮವನ್ನು ಜೈಸುವುದಕ್ಕೆ ಪುರಂದರ ದಾಸರು ತೋರಿಕೊಟ್ಟ ಉಪಾಯ. 'ಸತಿಸುತರಿರಬೇಕು | ಅತಿಮೋಹ ಬಿಡಬೇಕು' "ಯಚ್ಚಾತ್ಮನಃ ಪ್ರಿಯಂ | ದಾ ರಾನ್ ಸುತಾನ್ ಪ್ರಾಣಾನ್ ಪರಸ್ಮೈಚ ನಿವೇದನಂ" ಎಂಬಂತೆ ಹೆಂಡತಿ ಮಕ್ಕಳು ಮೊದಲ್ಗೊಂಡು ನಮಗೆ ಪ್ರಿಯವಾದುವೆಲ್ಲವನ್ನೂ ಸ್ವಾಮಿಗೆ ನಿವೇದನ ಮಾಡುವರೇ ದಾಸರೆನಿಸಿಕೊಳ್ಳುವುದಕ್ಕೆ ಅರ್ಹರು. ದಾಸನಿಗೆ ಯಾವುದ ರಲ್ಲಿಯೂ ಸ್ವಾಮಿತ್ವವು ಸಲ್ಲದು - "ತನುಮನ ಧನಗಳ ನಿನ ಗರ್ಪಿಸಿದೆನು | ಎನಿತಾದರು ಇಡು" ಎಂದು ಶರಣರ ಕಾದು ಕೊಂಡಿಹದಾತನಿಗೆ ತನ್ನ ದೇಹೇಂದ್ರಿಯಗಳನ್ನು ಸಮರ್ಪಣ ಮಾಡುವುದೇ ದಾಸನ ಕೆಲಸ. ಯಾವನು ಸರ್ವ ಭೂತ ಮಹೇಶ್ವರನೋ, ಜಗದೊಡೆಯನೋ ಅವನು ನನಗೂ ಮ ಹೇಶ್ವರನು, ಒಡೆಯನು. ಅವನು ಸ್ವಾಮಿ-ನಾನು ಭೃತ್ಯ, ಅವನು ಸರ್ವ ಸ್ವತಂತ್ರನು-ನಾನು ಪರತಂತ್ರನು. ಈ ವಿಧ ವಾದ ಪರಮಾತ್ಮ ಪಾರತಂತ್ರ್ಯವನ್ನು ಸ್ವೀಕರಿಸುವುದೇ ದಾಸತ್ವವನ್ನು ಕೈಕೊಳ್ಳುವುದು.

ನಮ್ಮ ಸರ್ವಸ್ವವು ಅವನದೇ ಎಂಬ ಜ್ಞಾನಮಾತ್ರವೇ ಸಾಲದು. ದೇಹೇಂದ್ರಿಯಾದಿಗಳ ವ್ಯಾಪಾರಗಳೂ ಅವನ ಪ್ರೇರಣೆಯಿಂದಲೇ ನಡೆಯುತ್ತಿರುವುವು ಎಂದು ತಿಳಿಯ ಬೇಕು.

ಈಶ್ವರಃ ಸರ್ವಭೂತಾನಾಂ ಹೃದ್ದೇಶೇ ಽರ್ಜುನ ತಿಷ್ಠತಿ | ಭ್ರಾಮಯನ್ ಸರ್ವ ಭೂತಾನಿ ಯಂತ್ರಾ ರೂಢಾನಿ ಮಾ ಯಯಾ ||

ಹೀಗೆ ಈಶ್ವರನು ಸರ್ವ ಪ್ರಾಣಿಗಳ ಹೃದಯದಲ್ಲಿ ಅಂತ ರ್ಯಾಮಿಯಾಗಿದ್ದು ಆ ಪ್ರಾಣಿಗಳನ್ನು ಬೊಂಬೆಗಳನ್ನಾಗಿ ಆಡಿಸುವಂತೆ ತನ್ನ ಇಚ್ಛಾನುಸಾರವಾಗಿ ಆಡಿಸುತ್ತಿರುವನು ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ ಅಭಿಪ್ರಾಯ ವನ್ನು ದಾಸರು—

ಕಪಟನಾಟಕ ಸೂತ್ರಧಾರಿ ನೀನೇ | ನೀನೇ ಆಡಿಸದಿರಲು ಜಡವನಿತೆಯ ಬೊಂಬೆ | ಏನು ಮಾಡಲು ಬಲ್ಲುದು ತಾನು ಬೇರೇ || ಎಂದು ಸೂಚಿಸಿರುವರು.

'ಹರಿ ಸರ್ವ ಪ್ರೇರಕ ಪುರಂದರ ವಿಠಲ | ಹರಿ ಯಾಡಿಸಿ ದಂತಾಡುತಿಪ್ಪುದು ಜಗ' ಆದುದರಿಂದ—

ಕಾಯೇನ ವಾಚಾಮನಸೇಂದ್ರಿಯೈರ್ವಾನುಸೃತಃ ಸ್ವ ಭಾವಂ | ಕರೋತಿಯದ್ಯತ್ಸ ಕಲಂ ಪರಸ್ಮೈನಾರಾಯಣಾ ಯೇತಿ ಸಮರ್ಪಯೇತ್ತತ್" ಎಂಬಂತೆ

ಸರ್ವ ಕರ್ಮಗಳ ಪ್ರಾಣಾಂತರ್ಯಾಮಿಯಾದ ಹರಿಗೆ ಅರ್ಪಿ ಸಿದರೆ | ಒಂದೊಂದು ಅನಂತ ಫಲವಾಡಿ ತೋರುವ ಗುರು ಪುರಂದರ ವಿಠಲರೇಯನು ಅನಾದಿಕಾಲದಲಿ ||

ಭಗವಂತನಿಗೆ ಕರ್ಮವು ಅರ್ಪಿತವಾದ ಬಳಿಕ ಅರ್ಪಿತ ಕ ರ್ಮದ ಫಲವೂ ಅವನ ಕೈಯನ್ನೇ ಸೇರುವುದು—

'ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ | ಎಂದು ಶ್ರೀಕೃಷ್ಣನ ಅನುಶಾಸನವೇ ಇರಲಾಗಿ ನಮಮ ನಮ ಮ-ನನ್ನದಲ್ಲ, ನನ್ನದಲ್ಲ' ಎಂದು ಅವನಿಗೆ ಫಲಸಮರ್ಪಣೆ ಮಾ ಡಿದಲ್ಲದೆ ಶ್ರೀಕೃಷ್ಣನು ಪ್ರೀತನಾಗನು. ನಾವು ಮಮಕಾರ ದಿಂದ ಮುಕ್ತರಾಗೆವು. 'ಅಹಂಕಾರ ಮಮಕಾರವಳಿಯದೆ ವಿಹಂಗಮಪತಿ ಸಿಲುಕುವನೆ ಮರುಳೆ ?'

ಈ ತೆರದಲ್ಲಿ ಮನೆ ಮಡದಿ ಮಕ್ಕಳಲ್ಲಿ ಅತಿಮೋಹ, ಸ್ವತಂ ತ್ರ ಕರ್ತೃತ್ವಾಭಿಮಾನ, ಕರ್ಮಫಲದಾಸೆ ಇವುಗಳನ್ನು ಬಿಟ್ಟು

ಯಾವ ಭಕ್ತನು 'ಬಿಡೆ ನಿನ್ನ ದಾಸ್ಯಪದವಿಯನು' ಎಂದು ಭಗವಂತನನ್ನು ಮರೆಹೊಕ್ಕು ಅವನಲ್ಲಿಯೇ ತನ್ನ ಮನಸ್ಸನ್ನು ಸುಸ್ಥಿರವಾಗಿ ಇಟ್ಟಿರುವನೋ, ಅವನು ಸಂಸಾರಿಯಾಗಿದ್ದರೂ ಕಾಮ ಕ್ರೋಧಗಳ ವಶನಾಗನು. ಅವನು ಭಗವಂತನನ್ನೇ—

'ಮಾತಾಪಿತನು | ಭ್ರಾತನು ಹಿತನು | ನಾಥನು ಜ್ಞಾತನು ಸಂತಾರಕನೂ | ಮತಿಯೂ ನೀನೇ | ಗತಿಯೂ ನೀನೇ |' ಎಂದು ಸಂಪೂರ್ಣವಾಗಿ ನಂಬಿ-'ಆದದ್ದೆಲ್ಲ ಒಳಿತೆ ಆಯಿತು ನಮ್ಮ ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು' ಎಂದು ಸಂಸಾರದಲ್ಲಿ ಪ್ರಾಪ್ತವಾಗುವ ಸಂಪತ್ತು ಮಾತ್ರವೇ ಅಲ್ಲ ವಿಪತ್ತು ಕೂಡ, ಸುಖ ಮಾತ್ರವೇ ಅಲ್ಲ ದುಃಖವು ಕೂಡ, ವಂದನವು ಮಾತ್ರವೇ ಅಲ್ಲ, ನಿಂದನವು ಕೂಡ, ಭಗವಂತನ ಪ್ರಸಾದ, ಅವನ ಸೇವಾಸಾಧನ ಎಂದು ಭಾವಿಸುವನು.

'ಸ್ವರ್ಗವಾಗಲಿ ಅಪವರ್ಗವಾಗಲಿ | ಹರಿಯು ಚಿತ್ತಕೆ ಬಾರದದಾನೊಲ್ಲೆ | ನೆರೆಮನೆಯಾಗಲಿ ಗಿರಿ ಮಲೆಯಾಗಲಿ | ಪುರುಷೋತ್ತಮ ನಿತ್ತುದೆ ಪುರುಷಾರ್ಥವೆನಗೆ | ಗರುಡವಾಹನ ಲಕ್ಷ್ಮೀನಾರಾಯಣನ ಚಿತ್ತಕೆ | ಪ್ರತಿಕೂಲವಾದರೆ ಅಸಂಮತವೆನಗೆಂದೆಂದಿಗೆ"—

ಹೀಗೆ ಹರಿಯ ಚಿತ್ತಕ್ಕೆ ವಿರುದ್ಧವಾದುದನ್ನು ಯಾವನು ಆಶಿಸನೋ ಅವನು ಭಗವಂತನ ಪರಮಾನುಗ್ರಹಕ್ಕೆ ಪಾತ್ರನಾಗಿ, ಅಪಾರ ದಿನಗಳಿಂದ ಆರ್ಜನೆಮಾಡಿದ ಅವನ ಪಾಪ್ಮೋಸುಗಳು (ಪಾಪವನ್ನು) ಹೋಗುವುವು. ಜ್ಞಾನಾಗ್ನಿಯಿಂದ ಚಿತ್ತವು ಶುದ್ಧಿಯಾಗುವುದು. ಆಗ ಸಾಧಕನು ತನ್ನ ಸ್ವಸ್ವರೂಪ ಸುಖವನ್ನು ಕಂಡು-ಈ ಪರಿಯಲಿ ಕಡೆಗೈದಿಸುವೆ ಗುರು ಪುರಂದರ ವಿಠಲ ಮುಕುತಿಪ್ರದ ನೀನೂ" ಎಂದು ಭಗವಂತನನ್ನು

ವಂದಿಸುವನು. ಇಂತಹ ಜೀವನ್ಮುಕ್ತನೇ-'ಅಪರಾಧಿ ನಾನಲ್ಲ। ಅಪರಾಧವೆನಗಿಲ್ಲ' ಎಂದು ಧಾರಾಳವಾಗಿ ಹೇಳಿಕೊಳ್ಳಬಹುದು. ಅಲ್ಲದೆ, ಅಂತಹ ಮಹಾತ್ಮನು ಅಪರಾಧವನ್ನೇ ಮಾಡನು.

ಪರಂತು ನರಜನ್ಮವೀಡೇರುವುದಕ್ಕಾಗಿ ಹುಟ್ಟಿದ ಸಾಧನಗಳು ಪ್ರಕೃತಿ ವೈಚಿತ್ರ್ಯದಿಂದ ದುರ್ಜನರ ಕೈಯಲ್ಲಿ ಬಿದ್ದು ಭುಕ್ತಿ ಸಾಧನಗಳಾಗಿ ಪರಿಣಮಿಸುವುದನ್ನು ಕಂಡು ದಾಸರು ಇಂತೆನ್ನುವರು:—

ಉದರ ವೈರಾಗ್ಯವಿದು ನಮ್ಮ ।
ಪದುಮನಾಭನಲ್ಲಿ ಲೇಶ ಭಕುತಿಯಿಲ್ಲ ॥
ಕಂಚುಗಾರನ ಬಿಡಾರದಂದದಿ ।
ಕಂಚು ಹಿತ್ತಾಳೆ ಪ್ರತಿಮೆಗಳ ನೋಡಿ ।
ಮಿಂಚಬೇಕೆಂದು ಬಲು ಜ್ಯೋತಿಗಳನೆ ಹಚ್ಚಿ ।
ವಂಚನೆಯಿಂದಲಿ ಪೂಜೆಯ ಮಾಡುವುದು ॥
ಬೂಟಕ ತನದಲಿ ಬಹಳ ಭಕುತಿ ಮಾಡಿ ।
ನಾಟಿಯ ತನಗಾರಿಲ್ಲೆನಿಸಿ ।
ನಾಟಕ ಸ್ತ್ರೀಯಂತೆ ಬಯಲಡಂಭವ ತೋರಿ ।
ಊಟದ ಮಾರ್ಗದ ಜ್ಞಾನವಿದಲ್ಲದೆ ॥

ಇಂತಹ ಡಾಂಭಿಕರು-'ದಾಸೋಹಂ ತವ ದಾಸೋಹಂ' 'ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ'ವೆಂದು ಆರಭಟ ಮಾಡಿದರೆ ಹರಿ ಒಪ್ಪುವನೆ ? ಹರಿದಾಸರೊಪ್ಪುವರೆ ?

ಹುಟ್ಟುವ ಭೀತಿ ಹೊಂದುವ ಭೀತಿ । ವಿಠಲನಂಘ್ರಿ ನೆನೆಯದವಗೆ। ಕಾಲನಭೀತಿ ಕರ್ಮದಭೀತಿ ಗೋ। ಪಾಲನ ದಾಸನಾಗದವಗೆ। ಅರಿಷಡ್ವರ್ಗದ ಮಹಾಭೀತಿ ಶ್ರೀ। ಹರಿನಾಮವುಚ್ಚರಿಸದವಗೆ। ಹಲವು ಮಾತಿನ್ನೇನು ಹಲವುಭೀತಿ ಶ್ರೀ ಪುರಂದರ ವಿಠಲನ ಪೂಜಿಸದವಗೆ—

ಗೋಪಾಲ ದಾಸನಾದವನಿಗೆ ಯಾವ ಭೀತಿಗೂ ಕಾರಣವಿಲ್ಲವೆಂದು ದಾಸರು ಸೂಚಿಸಿರುವಂತೆ ಗೋಪಾಲನೂ ಅಭಯವನ್ನು ಕೊಟ್ಟಿರುವನು:—

ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷ ಯಿಷ್ಯಾಮಿಮಾಶುಚಃ-ನಾನು ನಿನ್ನನ್ನು ಸರ್ವ ಪಾಪಗಳಿಂದಲೂ ಬಿಡುಗಡೆ ಮಾಡುವೆನು, ಹೆದರಬೇಡ: 'ಮಚ್ಚಿತ್ತಃ ಸರ್ವ ದುರ್ಗಾಣಿ ಮತ್ಪ್ರಸಾದಾತ್ ರಿಷ್ಯಸಿ-ನಿನ್ನ ಮನಸ್ಸನ್ನು ನನ್ನಲ್ಲಿಯೇ ಇಟ್ಟವನಾದರೆ ನನ್ನ ಅನುಗ್ರಹದಿಂದ ನೀನು ನಿನ್ನ ಕಷ್ಟಗಳೆಲ್ಲವನ್ನೂ ದಾಟುವಿ-'ನಮೇಭಕ್ತಃ ಪ್ರಣಶ್ಯತಿ-ನನ್ನ ಭಕ್ತನು ಎಂದಿಗೂ ಕೆಡನು' ಇಷ್ಟು ಬಗೆಯಲ್ಲಿ ಶ್ರೀಕೃಷ್ಣನು ಮಾನವ ಕೋಟಿಗೆ ಅಭಯವನ್ನು ಕೊಟ್ಟಿರುವಲ್ಲಿ ಜ್ಞಾನ ಭಕ್ತಿ ವೈರಾಗ್ಯವುಳ್ಳ ಅವನ ದಾಸನಿಗೆ ಭೀತಿಯೆಲ್ಲಿಯದು ?

ದಾಸರು ಪಾಪಿಗಳ ಪರವಾಗಿ ಭಗವಂತನನ್ನು ಇಂತೆಂದು ಪ್ರಾರ್ಥಿಸುವರು—

ತಪ್ಪಿಲ್ಲದೆ ಅವಗುಣವಿಲ್ಲದೆ ಅಯ್ಯಾ ಒಬ್ಬೊಬ್ಬರನೊಬ್ಬರು ಮರೆ ಹೊಗುವರೆ ದೇವಾ | ಮರೆ ಹೊಕ್ಕವರ ಕಾವನಲ್ಲದೆ |
ದುರಾಚಾರಿಯಾಗಿ ದುಃಖಿ ಭೀತನಾಗಿ ಮರೆಹೊಕ್ಕೆ, ಕಾಯೋ ಅಚಲಾನಂದವಿಠಲಾ ||

ಪತಿತ ಪಾವನನಾದ ಶ್ರೀಕೃಷ್ಣನು ಅದಕ್ಕೊಡಂಬಡುವನು—

ಅಪಿಚೇತ್ಸುದುರಾಚಾರೋ ಭಜತೇಮಾಮನನ್ಯಭಾಕ್ |
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋಹಿಸಃ ||

ಅವನು ದುರಾಚಾರಿಯಾದರೂ ನನ್ನನ್ನೇ ಭಜಿಸುವನಾದರೆ, ಅವನನ್ನು ನಾನು ಸಾಧುವೆಂದೇ ಭಾವಿಸುವೆನು. ಅವನು ಕ್ಷಿಪ್ರವಾಗಿಯೇ ಧರ್ಮಾತ್ಮನಾಗುವನು. ಮುಕ್ತಿಯನ್ನು ಪಡೆಯುವನು.

ಮತ್ತು:—

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿಸ್ಯುಃ ಪಾಪ ಯೋನಯಃ | ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂಗತಿಮ್‌''

ಎಂಬೀ ಶ್ರೀಕೃಷ್ಣನ ವಚನವನ್ನನುಸರಿಸಿ ದಾಸರು ಹೇಳುವು ದೇನೆಂದರೆ—

ನಾಡೊಂಕಾದರೆ ಏನೋ ನಿನ್ನ ನಾಮ ಡೊಂಕೆ ವಿಠಲ || ನಾನು ಹೊಲೆಯನಾದರೆ ನಿನ್ನ | ನಾಮ ಹೊಲೆಯೆ ವಿಠಲ | ಅಜ್ಞಾನಾದರೇನು ಕಾಯೊ | ಸುಜ್ಞ ಪುರಂದರ ವಿಠಲ ||

ಅಲ್ಲದೆ—

ಆವ ಕುಲವಾದರೇನು ಆವನಾದರೇನು | ಆತ್ಮಭಾವವರಿತ ಮೇಲೆ ||........ವಿಷಯಾಸೆಗಳನೆ ಬಿಟ್ಟು | ಹಸನಾದ ಗುರು ಭಕ್ತಿ ಮಾಡೋ ||........ಹೀನ ಕರ್ಮಗಳನೆ ಬಿಟ್ಟು | ಹಿಗ್ಗಿ | ಜ್ಞಾನವೊಲಿಸಿರೋ || ಕುಲದಮೇಲೆ ಹೋಗಬೇಡ || ಮನುಜ | ಕುಲವಿಲ್ಲ ಜ್ಞಾನಿಗಳಿಗೆ || ವರದ ಪುರಂದರ ವಿಠಲನ | ಪದವ ಸೇರಿ ಮುಕ್ತನಾಗೋ ||

ಎಂದು ಜ್ಞಾನ ಭಕ್ತಿ ವೈರಾಗ್ಯ ಸಂಪನ್ನರಾದ ಸಕಲ ವರ್ಣಾಶ್ರಮದವರಿಗೂ ಮುಕ್ತಿಗೆ ಅರ್ಹತೆಯುಂಟೆಂದು ಹೇಳಿ—

ಚರ್ಮವ ತೊಳೆದರೆ ಕರ್ಮವು ಪೋಪುದೆ | ಮರ್ಮವ ತಿಳಿಯದೆ ಬಿಕನಾಸಿ | ಬೊಮ್ಮನಯ್ಯ ಪುರಂದರ ವಿಠಲನ ಪಾಡಿ | ನಿರ್ಮಲವಿಂ ಬಾಳೊ ಬಿಕನಾಸಿ''

ಎಂದು ಸಾರಿ, ಹರಿನಾಮ ಸ್ಮರಣೆ ಕೀರ್ತನಾದಿಗಳಿಂದ ಅಂತಃಕರಣ ಶುದ್ಧಿಯನ್ನು ಸಂಪಾದಿಸುವುದು ಅವಶ್ಯ ಕರ್ತವ್ಯವೆಂದು ಬೋಧಿಸಿರುವರು.

ಕಡೆಗೆ—

'ಆಲೋಡ್ಯ ಸರ್ವ ಶಾಸ್ತ್ರಾಣಿ | ವಿಚಾರ್ಯಶ್ಚ ಪುನಃಪುನಃ |
ಇದಮೇಕಂ ಸುನಿಷ್ಪನ್ನಂ | ಧ್ಯೇಯೋ ನಾರಾಯಣಸ್ಸದಾ |'
ಎಂಬ ವಚನಾನುಸಾರವಾಗಿ ದಾಸರು ಕಲಿಯುಗದಲ್ಲಿ ಸರ್ವ ಸಾಮಾನ್ಯರೂ ಉದ್ಧಾರವಾಗಲು ತೋರಿಕೊಟ್ಟ ಸುಳುವಾದ ಹಾದಿ—ಸುಳಾದಿ, ಯಾವುದೆಂದರೆ--

ನಾಘನ ತ್ರಾಘನ ಎನ್ನದಿರಿ | ಘನಸೊಬ್ಬನೆ ಕಾಣಿರೋ
ಪುರಂದರ ವಿಠಲಾ ||

ಮನ ಚಂಚಲದಿ ತಪವು ಮಾಡಲಶಕ್ಯವು |
ಘನ ಅಜ್ಞಾನದಿ ಕೆಲವು ಕರ್ಮವು ಹತ್ತವು |
ಇನಿತಾದ್ದರಿಂದ ಪುರಂದರ ವಿಠಲ ಈ ಯುಗದಿ |
ನಾಮ ಸ್ಮರಣೆ ಲೇಸೆಂದನು ||

ಮತ್ತು ಅಪಾಯಗಳೆಲ್ಲಕ್ಕೂ ಉಪಾಯವೊಂದೇ ಎನ್ನುವರು:-

ಅಪಾಯ ಕೋಟಿ ಕೋಟಿಗಳಿಗೆ | ಉಪಾಯವೊಂದೆ ಹರಿದಾಸರು ತೋರಿಸ ಉಪಾಯ ಬಾದೆ | ಪುರಂದರ ವಿಠಲ ಎಂದು ಕೂಗಿಟ್ಟು ಕರೆವುದೇ ಉಪಾಯ ||

'ವಿಠಲ ವಿಠಲ ಗೋವಿಂದ
ವಿಠಲ ವಿಠಲ ಮುಕುಂದ
ಜಯ ವಿಠಲ—ನಮೋ ವಿಠಲ'

ಮಲ್ಲೇಶ್ವರ,
ಬೆಂಗಳೂರು.
ತಾ|| ೨೦-೧೨-೧೯೨೯

**ಚ. ವಾಸುದೇವಯ್ಯ.**

# ಪೀಠಿಕೆ

ಮಹಾನುಭಾವರಾದ **ಶ್ರೀ ಪುರಂದರದಾಸರ** ಜೀವನ ಚರಿತ್ರೆಯಲ್ಲಿ ಸಾರಭೂತವಾದ ಕೆಲವು ಅಂಶಗಳನ್ನು ತೆಗೆದುಕೊಂಡು ದೃಶ್ಯರೂಪದಲ್ಲಿ ಚಿತ್ರಿಸುವ ಮಹತ್ಪ್ರಯತ್ನವನ್ನು ಕೈಗೊಳ್ಳುವುದರಲ್ಲಿ ನನಗೆ ಎರಡು ಆಶಯಗಳು ಒತ್ತಾಸೆಯಾದುವು ಕನ್ನಡ ನಾಡಿನಲ್ಲಿ ಹುಟ್ಟಿ ಬೆಳೆದು, ಕನ್ನಡ ನಾಡಿನ ಮತ್ತು ಕನ್ನಡ ನುಡಿಯ ಸೇವೆಗೆ ತನುಮನವಿತ್ತ ಕನ್ನಡಿಗ ಮಹಾಪುರುಷರ ಜೀವಿತವನ್ನೇ ದೃಶ್ಯ ವಿಷಯಕವನ್ನಾಗಿ ತೆಗೆದುಕೊಳ್ಳಬೇಕೆಂಬ ಅಭಿಲಾಷೆಯೊಂದು; ಕನ್ನಡ ಸಂಸ್ಕೃತಿ, ಸಂಪ್ರದಾಯಗಳಿಗೆ ಅನುಗುಣವಾದ ಸಂಗೀತ ಪದ್ಧತಿಯನ್ನನುಸರಿಸಿದ ಹಾಡುಗಳನ್ನೂ ಮತ್ತು ಪದ್ಯಗಳನ್ನೂ ಕನ್ನಡ ನಾಟಕಗಳಲ್ಲಿ ಪುನಃ ಆಚರಣೆಗೆ ತರಬೇಕೆಂಬ ತೀವ್ರಾಸಕ್ತಿಯೊಂದು. ಈ ಆಶಯಗಳನ್ನು ಪೂರ್ತಿಯಾಗಿ ನೆರವೇರಿಸಲು ಅಲ್ಪಮತಿಯಾದ ನನ್ನಿಂದ ಅಸಾಧ್ಯವೇ ಸರಿ. ಆದರೂ ತೊಡಗಿದ ಕಾರ್ಯವು ದಾಸರಾಯರ ಅನುಗ್ರಹ ವಿಶೇಷದಿಂದ, ಕಡೆಗಂಡಿರುತ್ತದೆ. ಇದರ ತಪ್ಪು ಒಪ್ಪುಗಳ ವಿಮರ್ಶೆಯು ವಾಚಕವರ್ಗಕ್ಕೆ ಸೇರಿದುದು. 'ಕಬ್ಬು ಡೊಂಕಾದರೆ ಸವಿಡೊಂಕೆ ವಿಠಲ' ಎಂಬಂತೆ ದೃಶ್ಯ ರಚನೆಯು ಡೊಂಕಾದರೂ, ದೃಶ್ಯ ವಿಷಯವು ಮಹತ್ತರವಾದುದು, ಪರಮ ಪಾವನಕರವಾದುದು. ಆದುದರಿಂದ ಪ್ರಾಜ್ಞರು ವಿಷಯಕ್ಕಾದರೂ ಪ್ರಾಶಸ್ತ್ಯವನ್ನು ಕೊಟ್ಟು, ಈ ಪುಸ್ತಕವನ್ನು ಆದರಿಸದಿರಲಾರರೆಂದು ನಂಬುತ್ತೇನೆ.

ಕನ್ನಡಿಗರಿಗೆ ಅಕ್ಷರಾಭ್ಯಾಸದ ತಳಹದಿಯನ್ನು ಹಾಕಿಕೊಟ್ಟ ಬಾಲಬೋಧಕರೂ, 'ಆರ್ಯಕೀರ್ತಿ'ಯ ಧವಳ ಕೀರ್ತಿಯಿಂದ ಶೋಭಿತರೂ, ಕನ್ನಡ ಭಾಷಾ ಭೀಷ್ಮರೂ, ಪರಮ ಪೂಜ್ಯರೂ

ಆದ ಶ್ರೀಯುತ ಚ. ವಾಸುದೇವಯ್ಯನವರು ಈ ಚಿಕ್ಕ ಗ್ರಂಥಕ್ಕೆ ಅಮೋಘವಾದ ಮುನ್ನುಡಿಯನ್ನು ಬರೆದು ಕೊಟ್ಟುದಕ್ಕಾಗಿ ಅವರಿಗೆ ಚಿರಋಣಿಯಾಗಿದ್ದೇನೆ. ಮುನ್ನುಡಿಯ ಮೂಲಕ ಈ ಗ್ರಂಥಕ್ಕೆ ಅವರ ಸಂಬಂಧವುಂಟಾದುದು ನನಗೆ ಪರಮ ಶ್ರೇಯಸ್ಕರವೆಂದು ಭಾವಿಸುತ್ತೇನೆ.

ಉತ್ತಮ ಕವಿತಾಶಕ್ತಿಯುಳ್ಳವರಾಗಿದ್ದರೂ, ಗುಪ್ತಗಾಮಿನಿಯಂತಿರುವ ಶ್ರೀಯುತ ದಾಸರ ಲಕ್ಷ್ಮೀನಾರಾಯಣರಾಯರವರು ಈ ದೃಶ್ಯದಲ್ಲಿ ಸೇರಿಸಲು ಕೆಲವು ಹಾಡುಗಳನ್ನು ರಚಿಸಿಕೊಟ್ಟುದಕ್ಕಾಗಿಯೂ, ಮತ್ತು ಅವರ ಕೆಲವು ಸಲಹೆಗಳಿಗಾಗಿಯೂ ಅವರಿಗೆ ಬಹಳ ಕೃತಜ್ಞನಾಗಿದ್ದೇನೆ.

ತಮ್ಮ ಅಮೋಘವಾದ 'ಸುಬೋಧ' ಮಾಸಪತ್ರಿಕೆಯಲ್ಲಿ ಇದನ್ನು ಪ್ರಕಟಿಸುತ್ತಿದ್ದುದಲ್ಲದೆ ಅದನ್ನು ಪುಸ್ತಕ ರೂಪದಲ್ಲಿ ಸಕಾಲಕ್ಕೆ ಮುದ್ರಿಸಿಕೊಟ್ಟ, ಆ ಪತ್ರಿಕೆಯ ಸಂಪಾದಕರಾದ ಶ್ರೀಯುತ ಯಂ. ರಾಮರಾಯರಿಗೆ ನನ್ನ ಕೃತಜ್ಞತಾಪೂರ್ವಕವಾದ ವಂದನೆಗಳು.

ಈ ನಾಟಕವನ್ನು ಬರೆಯುವುದರಲ್ಲಿ ಮೊದಲಿನಿಂದ ಕೊನೆಯವರೆಗೂ, ನನ್ನ ತಮ್ಮ ಚಿ|| ರಾ|| ವರವಣಿ ರಾಮರಾಯನಿಂದ ಹಲವು ವಿಧದಲ್ಲಿ ದೊರೆತ ಬೆಂಬಲವು ಸ್ಮರಣೀಯವಾದುದು.

ಬೆಂಗಳೂರು ನಗರ.<br>ಶುಕ್ಲ ಸಂ|| ಮಾರ್ಗಶೀರ್ಷ<br>ಶು|| ಏಕಾದಶಿ.

**ವರವಣಿ ರಾಜಾರಾವ್.**

## ಈ ನಾಟಕದಲ್ಲಿರುವ ನೋಟಗಳ ಸಾರಾಂಶವು.

**ಪೀಠಿಕಾನೋಟ**—ಶ್ರೀಕೃಷ್ಣನ ಸಭೆಯಲ್ಲಿ ಗೋಪಿಕಾ ಸ್ತ್ರೀಯರು ಜಯಘೋಷವನ್ನು ಮಾಡುತ್ತಾ ನರ್ತನ ಮಾಡುತ್ತಿರುವಾಗ ನಾರದರು ಪ್ರವೇಶಿಸಿ ಕೃಷ್ಣನ ನಾಮದ ಮಹಿಮೆಯನ್ನು ಹೊಗಳುವರು. ಕಲಿಯುಗದಲ್ಲಿ ಪುರಂದರ ಗಡದಲ್ಲಿ ಜನ್ಮವೆತ್ತಿ ಪಂಡಿತ ಪಾಮರರೆಲ್ಲರಿಗೂ ಧರ್ಮದ ಸಾರವನ್ನು ಹರಡಬೇಕೆಂದು ನಾರದರಿಗೆ ಕೃಷ್ಣನ ಅಪ್ಪಣೆಯಾಗುವುದು.

**ಪ್ರಸ್ತಾವನೆ**—ನಾಂದೀ ಸ್ತೋತ್ರವಾದಮೇಲೆ ಸೂತ್ರಧಾರನು, ಪುರಂದರ ದಾಸರಿಗೆ ದೇವರು ಅನುಗ್ರಹಿಸಿದ ಪ್ರಸಂಗವನ್ನು ನಾಟಕ ರೂಪವಾಗಿ ಅಭಿನಯಿಸುವುದಾಗಿ ತಿಳಿಸುವನು.

### — ಪ್ರಥಮಾಂಕ —

೧ನೆಯ ನೋಟ—ನಾಯಕನು ಅಂಗಡಿಯಲ್ಲಿ ವ್ಯಾಪಾರ ಮಾಡುತ್ತ ತನ್ನ ದರ್ಪ, ಲೋಭ-ಇವುಗಳನ್ನು ತೋರಿಸುತ್ತಿರುವನು. ಒಬ್ಬ ವೃದ್ಧ ಬ್ರಾಹ್ಮಣನು ಬಂದು ತನ್ನ ಮಗನ ಉಪನಯನಕ್ಕೆ ಸಹಾಯವನ್ನು ಬೇಡಿ, ನಾಯಕನಿಂದ ಎರಡು ದುಗ್ಗಾಣಿಯನ್ನು ಪಡೆದು, ಅದನ್ನೂ ಅಲ್ಲಿಯೇ ಬಿಟ್ಟು ಹೊರಟು ಹೋಗುವನು.

೨ನೆಯ ನೋಟ—ನಾಯಕನ ಹೆಂಡತಿಯು ತುಳಸೀ ಪೂಜೆಯನ್ನು ಮಾಡುತ್ತಿರುವಳು. (ನಾಯಕನಿಗೆ ಈಕೆಯ ಮೂಲಕ ಜ್ಞಾನೋಪದೇಶಮಾಡಬೇಕೆಂದು) ಬ್ರಾಹ್ಮಣನು ಯಾಚಿಸಿ, ಈಕೆಯಿಂದ ಮೂಗುತಿಯನ್ನು ಪಡೆವನು.

೩ನೆಯ ನೋಟ—ಬ್ರಾಹ್ಮಣನು ಮೂಗುತಿಯನ್ನು ವಿಕ್ರಯಮಾಡಲು ನಾಯಕನ ಬಳಿಗೆ ಬಂದು ಸರಿಯಾದ ಬೆಲೆಯನ್ನು ಕಂಡು ಹಿಡಿಯೆಂದು ಹೇಳಿ ಹೋಗುವನು. ನಾಯಕನು ದಿಗ್ಭ್ರಮೆಯಾಗಿ, ಬ್ರಾಹ್ಮಣನನ್ನು ಕರೆತರಲು ಸೇವಕರನ್ನು ಕಳುಹಿಸುವನು. ಸೇವಕರು ಹಿಂದಿರುಗಿ ತಮಗೆ ಕೋಟಿ ಮಿಂಚು ಹೊಳೆದಂತೆ ಕಾಣಿಸಿತೆಂದು ಹೇಳುವರು. ನಾಯಕನು ಮೂಗುತಿಯನ್ನು ಸಂದೂಕದಲ್ಲಿಟ್ಟು ಬೀಗ ಮುದ್ರೆಯಿಂದ ಭದ್ರಪಡಿಸುವನು.

೪ನೆಯ ನೋಟ—ಮೂಗುತಿಯನ್ನು ತಂದು ಕೊಡದಿದ್ದರೆ ಶಿಕ್ಷಿಸುವುದಾಗಿ ಹೆಂಡತಿಯನ್ನು ಬೆದರಿಸಿ ನಾಯಕನು ಹೊರಟು ಹೋದಮೇಲೆ, ಆಕೆಯು ವಿಷವನ್ನು ಕುಡಿಯಲು ಯತ್ನಿಸುವಳು. ಮೂಗುತಿಯು ವಿಷದ ಬಟ್ಟಲಿನಲ್ಲಿ ಬೀಳುವುದು.

೫ನೆಯ ನೋಟ— ಸೇವಕರಿಗೂ ಒಬ್ಬ ದಾಸಯ್ಯನಿಗೂ ಚಮತ್ಕಾರವಾದ ಸಂಭಾಷಣೆಯಾಗುವುದು. ಬ್ರಾಹ್ಮಣನನ್ನು ಕರೆತರುವೆನೆಂದು ಹೇಳಿ ದಾಸಯ್ಯನು ಹೋಗುವನು.

೬ನೆಯ ನೋಟ— ನಾಯಕನು ಕೇಳಲು, ಹೆಂಡತಿಯು ಮೂಗುತಿಯನ್ನು ಕೊಡುವಳು. ನಾಯಕನು ಭ್ರಾಂತನಾಗುವನು. ಆತನಿಗೆ ಜ್ಞಾನೋದಯವಾಗುವುದು. ಸೇವಕನು ಬಂದು ಆತನನ್ನು ಅಂಗಡಿಗೆ ಕರೆದುಕೊಂಡು ಹೋಗುವನು.

೭ನೆಯ ನೋಟ—ಒಬ್ಬ ಗಿರಾಕಿಯು ಬಿಟ್ಟಿದ್ದ ಕಾಗದವನ್ನು ನೋಡುತ್ತಾ ನಾಯಕನು ದೇವರನ್ನು ವಂದಿಸುವನು. ಹೆಂಡತಿಯು ಬರುವಳು. ಎಲ್ಲಾ ಐಶ್ವರ್ಯವನ್ನೂ "ಕೃಷ್ಣಾರ್ಪಣ" ವೆಂದು ದಾನಮಾಡಿ ಪರಮಾತ್ಮನನ್ನು ಸ್ತೋತ್ರ ಮಾಡುವರು.

## — ದ್ವಿತೀಯಾಂಕ —

೧ನೆಯ ನೋಟ—ಪುರನಿವಾಸಿಗಳು ನಾಯಕರ ವಿಷಯವನ್ನು ಮಾತನಾಡುತ್ತಿರುವಾಗ ಗೋವಿಂದರಾಯನು ಬಂದು ಅವರು ಫಂಡರಾಪುರದಲ್ಲಿ ಕೇವಲ ವಿರಕ್ತ ಸ್ಥಿತಿಯಲ್ಲಿರುವರೆಂದು ತಿಳಿಸುವನು.

೨ನೆಯ ನೋಟ—ಫಂಡರಾಪುರದಲ್ಲಿ ವಿಠಲನೆದುರಿಗೆ ಭಜನೆ—ಗೋವಿಂದರಾಯನೇ ಮೊದಲಾದವರು ಬಂದು ವಿಚಾರಿಸಲು, ನಾಯಕರು ಹಂಪೆಗೆ ಹೋದರೆಂದು ತಿಳಿಯುವುದು.

೩ನೆಯ ನೋಟ—ವಿರೂಪಾಕ್ಷ ಶಾಸ್ತ್ರಿ, ತ್ರಿವಿಕ್ರಮ ಪಂಡಿತ, ರಾಮಾಚಾರಿ ಇವರುಗಳಿಗೆ ಪುರಂದರ ದಾಸರಮೇಲೆ ಅಸೂಯೆ-ದಾಸರೊಡನೆ ಇವರ ವ್ಯಂಗ್ಯ ನುಡಿಗಳ ಸಂಭಾಷಣೆ-ದಾಸರು ಗುರುಗಳ ಅನುಗ್ರಹವಿಲ್ಲದೆ ಯಾವುದೂ ಆಗದೆಂದು ತಿಳಿಸುವರು. ದಾಸರ ನುಡಿಗಳಿಗೆ ಇವರುಗಳು ಅಪಾರ್ಥಗಳನ್ನು ಕಲ್ಪಿಸಿಕೊಳ್ಳುವರು.

೪ನೆಯ ನೋಟ—ಗುಡಿಸಲಿನಲ್ಲಿ ದಾಸರ ಮಕ್ಕಳು ಹಸಿವೆಂದು ಅಳುತ್ತಿರುವಾಗ, ಯಾರೋ ಬಂದು ದಾಸರೆಲ್ಲೆಂದು ಕೇಳುವರು. ಅವರ ಹೆಂಡತಿಯು ಬೇಸರಿಕೆಯಿಂದ, ವಿಠಲನ ಬಳಿಗೆ ಹೋಗಿರಬಹುದೆಂದು ನುಡಿಯುವಳು.

ಬದಲಾವಣೆಯ ನೋಟ—ಗುಡಿಸಲು ಉಪ್ಪರಿಗೆಯ ಮನೆಯಾಗುವುದು. ಮಧ್ಯಾಹ್ನ ಎಲ್ಲಿಯೂ ಅಕ್ಕಿಯು ಸಿಕ್ಕದೆ, ಪುರಂದರದಾಸರು ಕಳವಳಪಟ್ಟು, ಅನಂತರ ಸಮಾಧಾನ ಮಾಡಿಕೊಂಡು, ಕೃಷ್ಣನನ್ನು ಹುಡುಕುವಂತೆ ಉಪ್ಪರಿಗೆಯ ಮನೆಯ ಮುಂದೆ ಹಾಡುವರು. ದಾಸರ ಹೆಂಡತಿಯು ಈಚೆಗೆ ಬಂದು ನಮಸ್ಕರಿಸುವಳು. ಆಕೆಯಿಂದ ಸಂಗತಿಯನ್ನು ತಿಳಿದು, ಆ ಮನೆ, ಐಶ್ವರ್ಯ, ಎಲ್ಲವನ್ನೂ ತೊರೆದು ಹೊರಟು ಹೋಗುವರು.

೫ನೆಯ ನೋಟ—ದಾರಿಯಲ್ಲಿ-ವೃದ್ಧರಾದ ತಾಯಿತಂದೆಗಳಿಗಿದ್ದ ಒಬ್ಬನೇ ಒಬ್ಬ ಮಗನು ಸತ್ತಿರುವುದನ್ನು ನೋಡಿ ಅವನನ್ನು ಪುರಂದರದಾಸರು ಬದುಕಿಸುವರು.

೬ನೆಯ ನೋಟ—ನದಿಯ ದಡದಲ್ಲಿ-ಕೃಷ್ಣಭಟ್ಟ, ಗೋಪಿ, ಇವರ ಕಪಟ ಆಚಾರ—ಪುರಂದರದಾಸರು ಅಂತರಂಗ ಕಲ್ಮಷದಿಂದ ಕೂಡಿದ ಬಾಹ್ಯಾಚಾರವನ್ನು ಹೀಯಾಳಿಸುವರು. ನೆರೆದಿದ್ದವರು ಮರೆಯಲ್ಲಿ ನಿಂತು ದಾಸರು ಹೇಳಿದುದು ನಿಜವೆಂದು ತಿಳಿಯುವರು. ಕಪಟ ಸನ್ಯಾಸಿಯೊಬ್ಬನೊಡನೆ ಗೋಪಿಯ ಸರಸ—ಸನ್ಯಾಸಿಯ ವೈರಾಗ್ಯವು ನಿಜವೆಂದು ಹೆಂಗಸರು ನಂಬುತ್ತಿರುವಾಗ ಪುರಂದರದಾಸರು "ಉದರ ವೈರಾಗ್ಯವಿದು" ಎಂದು ಹಾಡುವರು. ಗುಟ್ಟುರಟ್ಟಾಗಿ, ಎಲ್ಲರೂ ದಾಸರಿಗೆ ನಮಸ್ಕರಿಸುವರು. 'ಹರಿನಾಮ' ವನ್ನು ನೆನೆವಂತೆ ದಾಸರು ಎಲ್ಲರಿಗೂ ಹೇಳುವರು.

೭ನೆಯ ನೋಟ—ಮಾರಿ ಬಲಿಯನ್ನು ಪುರಂದರದಾಸರು ನಿಲ್ಲಿಸಿದರೆಂದು ಒಬ್ಬ ಕುಳವಾಡಿಯು ಹೇಳಿ, ದೇವರ ಸ್ತೋತ್ರಮಾಡುವನು.

೮ನೆಯ ನೋಟ—ಅಡವಿಯಲ್ಲಿ ಪುರಂದರ ದಾಸರನ್ನು ಕಳ್ಳರು ಹೊಡೆಯಲು ಯತ್ನಿಸುವರು. ಅಷ್ಟರಲ್ಲಿಯೇ ಸೇವಕರು ರಕ್ಷಣೆಗೆ ಬರುವರು. ಕಳ್ಳರು ವಿರೂಪಾಕ್ಷ ಶಾಸ್ತ್ರಿಗಳೇ ಮೊದಲಾದವರಿಂದ ಕಳುಹಿಸಲ್ಪಟ್ಟವರೆಂದು ತಿಳಿಯ ಬರುವುದು.

## — ತೃತೀಯಾಂಕ —

೧ನೆಯ ನೋಟ—ರಾಧೆಯ ಶೃಂಗಾರಗೃಹ-ವಿಠಲನನ್ನೇ ವಿಟನನ್ನಾಗಿ ಭಾವಿಸುವಳು. ವಿಠಲನು ಪುರಂದರದಾಸರ ವೇಷದಲ್ಲಿ ಬಂದು, ಆಕೆಯೊಡನೆ ರಮಿಸಬೇಕೆಂದು ಹೇಳಿ ಕೈಗೆ ಬಂಗಾರದ ಬಳೆಯನ್ನು ತೊಡಿಸಿ ಹೋಗುವನು.

೨ನೆಯ ನೋಟ—ತ್ರಿವಿಕ್ರಮ ಪಂಡಿತರೇ ಮೊದಲಾದವರು 'ದಾಸರ' ವೇಷದಲ್ಲಿರುವ ವಿಠಲನನ್ನು ಹಿಂಬಾಲಿಸುವರು. ಭಜನೆಯ ಕೂಟವು ಬರುವುದು.

೩ನೆಯ ನೋಟ—ರಾಮಾಚಾರ್ಯರೇ ಮೊದಲಾದವರಿಗೆ ವಿಠಲನ ಸ್ಥಾನದಲ್ಲಿ ಪುರಂದರದಾಸರೂ, ಪುನಃ ವಿಠಲನೂ ಕಾಣುತ್ತಿರಲು, ದಿಗ್ಭ್ರಮೆಯಾಗಿ ಅನಂತರ ಪಶ್ಚಾತ್ತಾಪ ಪಡುವರು. ಅರ್ಚಕನು ದೇವರ ಬಳೆಯನ್ನು ಕಾಣದೆ ಆಳನ್ನು ಧರ್ಮಾಧಿಕಾರಿಯ ಬಳಿಗೆ ಕಳುಹಿಸುವನು. ದೇವರಿಗೆ ಮಂಗಳಾರತಿಯಾದಮೇಲೆ ರಾಧೆಯ ಕೈಯಲ್ಲಿ ಬಳೆಯು ಕಾಣುವುದು. ದಾಸರನ್ನು ಬಂಧನದಲ್ಲಿಡುವಂತೆ ಆಜ್ಞೆಯಾಗುವುದು.

೪ನೆಯ ನೋಟ—ಜನಗಳು ತಮತಮಗೆ ತೋರಿದಂತೆ ದಾಸರಮೇಲೆ ದೋಷಾರೋಪಣೆಯನ್ನು ಮಾಡುವರು. ದಾಸರ ಭಕ್ತನಾದ ಅಪ್ಪಣ್ಣನು ಅದೆಲ್ಲಾ ಸುಳ್ಳೆಂದು ತೋರಿಸುವನು.

೫ನೆಯ ನೋಟ—ಕಾರಾಗೃಹ—ಪುರಂದರದಾಸರು ಹಲವು ವಿಧಗಳಲ್ಲಿ ಪರಮಾತ್ಮನನ್ನು ಪ್ರಾರ್ಥಿಸುವರು. ಹಟಯೋಗದ ಕಡೆಗೆ ತಿರುಗಲು ವಿಠಲನು ದರ್ಶನಕೊಟ್ಟು ಅಭಯ ಪ್ರದಾನ ಮಾಡುವನು.

೬ನೆಯ ನೋಟ—ದಾಸರು ನಿರಪರಾಧಿಗಳೆಂಬುದಾಗಿ ತನಗಾದ ಸ್ವಪ್ನವನ್ನು ಧರ್ಮಾಧಿಕಾರಿಯು ಹೇಳುವನು.

೭ನೆಯ ನೋಟ— ವಿಠಲನ ದೇವಸ್ಥಾನ—ದಾಸರನ್ನು ಕಾರಾಗೃಹದಿಂದ ಕರೆದುಕೊಂಡು ಬರುವರು. ವಿಠಲನ ವಿಗ್ರಹದಿಂದ "ದಾಸರು ನಿರಪರಾಧಿಗಳು" ಎಂದು ಅಶರೀರವಾಣಿಯು ನುಡಿಯುವುದು. ಎಲ್ಲರೂ ದಾಸರಲ್ಲಿ ಕ್ಷಮಾಪಣೆಯನ್ನು ಬೇಡುತ್ತಿರಲು, ದಾಸರು ವಿಠಲನನ್ನು ಭಜಿಸುತ್ತಾ ಮಂಗಳವನ್ನು ಹಾಡುವರು.

**ಮಂಗಳಂ**

“ಪುರಂದರದಾಸರು”

## ಈ ನಾಟಕದಲ್ಲಿನ ಪಾತ್ರಗಳು.

---

ಶ್ರೀಕೃಷ್ಣ.
ನಾರದರು.
ನಾಯಕ—ಅನಂತರ ಪುರಂದರದಾಸರು.
ವೃದ್ಧ ಬ್ರಾಹ್ಮಣ.
ದಾಸಯ್ಯ.
ನಾಯಕನ ಹೆಂಡತಿ.
ಗೋವಿಂದರಾಯ.
ತ್ರಿವಿಕ್ರಮ ಪಂಡಿತರು.
ರಾಮಾಚಾರ್ಯರು.
ವಿರೂಪಾಕ್ಷ ಶಾಸ್ತ್ರಿಗಳು.
ಒಬ್ಬ ವೃದ್ಧ.
ಆತನ ಹೆಂಡತಿ.
ಒಂದು ಸಣ್ಣ ಮಗು.
ಕೃಷ್ಣಭಟ್ಟರು—ಪುರೋಹಿತರು.
ಗೋಪಿ.
ಸನ್ಯಾಸಿ.
ಅಪ್ಪಣ್ಣ—ಪುರಂದರದಾಸರ ಪರಮಭಕ್ತ.
ಕುಳವಾಡಿ.
ರಾಧೆ—ದೇವದಾಸಿ.

ಗೋಪಿಕಾಸ್ತ್ರೀಯರು, ಸೇವಕರು, ಗಿರಾಕಿಗಳು, ಮುತ್ತೈದೆಯರು, ಪುರನಿವಾಸಿಗಳು, ಸನ್ಯಾಸಿಯ ಶಿಷ್ಯರು, ಕಳ್ಳರು, ಭಜನೆಯ ಕೂಟದವರು.

ಶ್ರೀ ಲಕ್ಷ್ಮೀ ನೃಸಿಂಹಾಯನಮಃ.

# ಪುರಂದರ ದಾಸರು



## — ಪೀಠಿಕಾ ನೋಟ —

(ದ್ವಾರಕಾನಗರ - ಶ್ರೀಕೃಷ್ಣನ ಸಭೆ - ಗೋಪಿಕಾಸ್ತ್ರೀಯರು ಸಾಲಾಗಿ ನಿಂತು ಸಂಗೀತವನ್ನು ಹೇಳಿಕೊಂಡು ಜಯ. ಘೋಷವನ್ನು ಮಾಡುತ್ತಿರುವರು)

ಗೋಪಿಕಾಸ್ತ್ರೀಯರು:--

ರಾಗ ಪೂರ್ವಿ

ಶ್ರೀಮದ್ಯದುಕುಲನಾಯಕ ಜಯಜಯ |
ಕಾಮಿತಫಲದಾಯಕ ಜಯಜಯ ||
ವೇಣುನಾದ ಸುವಿನೋದನೆ ಜಯಜಯ |
ಗಾನಲೋಲ. ಮಧುಸೂದನ ಜಯಜಯ ||
ನೀಲಮೇಘ ಶುಭವಿಗ್ರಹ ಜಯಜಯ |
ಶೀಲ, ಗೋಕುಲಾನುಗ್ರಹ ಜಯಜಯ ||
ಕಾಮಕೋಟಿ ಸಮಸುಂದರ ಜಯಜಯ |
ಕಾಮಿನಿಯರ ಹೃತ್ಕಂಪದ ಜಯಜಯ ||
ದೇವದೇವ ಸರ್ವೋತ್ತಮ ಜಯಜಯ |
ಭಾವಜ ಪುರುಷೋತ್ತಮ ಹರಿ ಜಯಜಯ ||
ಶಕಟಾದ್ಯಸುರ ವಿಮರ್ದನ ಜಯಜಯ |
ಭಕುತಾಭೀಷ್ಟ ವಿವರ್ಧನ ಜಯಜಯ ||
ಪಕ್ಷಿಗಮನ ಕರಿರಕ್ಷಕ ಜಯಜಯ |
ಅಕ್ಷಯ, ಪಾಂಡವ ಪಕ್ಷನೆ ಜಯಜಯ ||
ಕಾಳೀಮರ್ದನ ನಗಧರ ಜಯಜಯ |
ಪಾಲಿಸು ಸಂತತ ಶ್ರೀಧರ ಜಯಜಯ ||

ಜಯ ಶ್ರೀಕೃಷ್ಣನೆ ಜಯಜಯ ಜಯಜಯ |
ಜಯ ಗೋವಿಂದನೆ ಜಯಜಯ ಜಯಜಯ ||
ಜಯ| ಮಹರಾಜ ಯದುಕುಲಧಾಮ |
ಸುರರಾಜ ಸುಂದರಶಾಮ |
ದ್ವಿಜರಾಜ ವಂಶಲಲಾಮ |
ದನುಜಾಂತಕ ವರಸಿಸ್ಸೀಮ
ಜಯಮಹರಾಜ | ಜಯಮಹಾರಾಜ ||

(**ಅನಂತರ ಗೋಪಿಕಾಸ್ತ್ರೀಯರು ನರ್ತನ ಮಾಡುವರು ಶ್ರೀಕೃಷ್ಣನು ವೇಣುಗಾನವನ್ನು ಮಾಡುತ್ತಿರುವನು. ಸ್ವಲ್ಪ ಹೊತ್ತಾದ ಮೇಲೆ ಶ್ರೀಕೃಷ್ಣನು ಮಾತನಾಡುವನು.**)

ಶ್ರೀಕೃಷ್ಣ:—ಮಾಸಿನಿಯರೇ, ಸ್ವಲ್ಪ ನಿಲ್ಲಿಸಿ -- ಕಿನ್ನರಿಯ ಶಬ್ದವು ಕೇಳುತ್ತಿರುವುದು. ನಾರದ ಮಹರ್ಷಿಗಳು ಬರುವಂತೆ ತೋರುತ್ತದೆ.

(**ನರ್ತನವು ನಿಲ್ಲುವುದು.**)

[ನಾರದರು ಹಾಡುತ್ತಾ ಪ್ರವೇಶಮಾಡುವರು]

ನಾರದರು—

**ರಾಗ ಮಧ್ಯಮಾವತಿ**

(**"ಪಾಲಿಸೆ ಪದುಮಾಲಯೆ" ಎಂಬಂತೆ**)

*ಧ್ಯಾನವ ಕೊಡು ಹರಿಯೇ | ನಿರಂತರ || ಪ || ಸೀನೆಗತಿಯೆಂದಾನು ಪೂರ್ವಕ | ಧ್ಯಾನಮಾಳ್ಪರ ಜನ್ಮ ಕರ್ಮವ | ನೇನುಮಾಡದೆ ಪೊರೆವೆನಿನ್ನ | ಸುನಾಮವೇ ಸುರಧೇನುವೆಂದೂ||

ನಿನ್ನ ನಾಮವ ನೆನೆದು | ಅಜಾಮಿಳನು | ಧನ್ಯನು ತಾನಾದನು || ಈಭುವನದಿ || ತನ್ನ ದೇಹಾತುರದಲನ್ಯರ | ಬನ್ನಬಡಿಸುತಲಿದ್ದ ಖಳನು | ನಿನ್ನನಾಮಸ್ಮರಣೆಬಲದೀ | ಘನ್ನಮುನಿಪತಿ ಎನ್ನಿಸಿದನೂ ||೧||

---

(***ಇವು ಶ್ರೀ. ದಾಸರ ಲಕ್ಷ್ಮೀನಾರಾಯಣರಾಯರಿಂದ**)

ದುರುಳ ದುಃಶ್ಯಾಸನನು | ಸಭೆಯೊಳಗಂದು | ತರಳೆ ದ್ರೌಪದಿದೇವಿಯ | ಸೆರಗನ್ನು ಎಳೆಯೆ || ಮುರಹರನೆ ಹಾ ಕೃಷ್ಣ ದ್ವಾರಕ | ಪುರನಿಲಯ ಪರಮಾತ್ಮ ಭಕ್ತರ | ಸುರ ತರುವೆ ಎಲ್ಲರುವೆ ಎತಕೆ | ಮರೆವೆಯೆನ್ನುತ ಮೊರೆಯ ಹೊರೆದೆಯೊ ||೨||

ನರಕ ಕೂಪದೊಳು ಬಿದ್ದು | ಅಳುತ್ತ ಮುಳುಗುತ | ಪರಿ ಪರಿ ಬಾಧೆಯನು || ಮುಂದೋರದೆ || ಹೊರಳುತ್ತೊರಳುತ ಮರುಕ ಗೊಳ್ಳುತ | ಹರಿಹರೀನಾರಾಯಣೆನ್ನಲು | ಸುರರ ಲೋಕವನಿತ್ತು ಸಲಹಿದೆ | ವರದ ಲಕ್ಷ್ಮೀಕಾಂತ ನಿರುಪಮ || ೩ ||

(ಮತ್ತೆ ಹಾಡುವರು)

(ತಾಂಡವನೃತ್ಯಹರೀ—ಎಂಬಂತೆ)

*ನಾಮಕೆ ಎಣೆಗಾಣೆ | ಮುಕುಂದನ ||ಪ|| ಶ್ರೀಮನೋರಮ | ಸುರ | ಸ್ತೋಮ ವಿನುತನಾಮ | ಕಾಮಿತ ಪ್ರದ ನಾಮ | ಮುಕುಂದನ || ೧ ||

ಕೆಟ್ಟ ಕಿರಾತನು | ಮುಟ್ಟಿ ಭಜಿಸಿತಾನೂ | (ಉ)ತ್ಕೃಷ್ಟ ಮುನಿಯಾದನು |-ಮುಕುಂದನ-|| ೨ ||

ಘೋರನಾರಕಿಗಳು | ನಾರಾಯಣನೆಂದು | ಸೂರೆಗೊಂಡರು ಸ್ವರ್ಗವ |-ಮುಕುಂದನ-|| ೩ ||

ನಾರಗಬಾರೆಂದು | ಚೀರಲು ಅಜಮಿಳ | ಸೇರಿದನಪವರ್ಗವ |— ಮುಕುಂದನ— || ೪ ||

ಲಕ್ಷ್ಮೀಕಾಂತನನಾ | ಮೋಚ್ಚಾರದಿ ದ್ರೌಪದಿ | ರಕ್ಷಿತೆಯಾದಳಿನ್ನು |— ಮುಕುಂದನ —|| ೫ ||

ಶ್ರೀಕೃಷ್ಣ—ನಾರದರೇ, ತಮ್ಮ ಗಾನವನ್ನು ಕೇಳಿ ಬಹಳ ಆನಂದಪಟ್ಟೆನು.

ನಾರದ—ಕೃಷ್ಣ. ವೇಣುಗಾನದಿಂದ ಮೂರು ಲೋಕಗಳನ್ನೂ ಮೋಹಗೊಳಿಸಿದ ಗಾನಲೋಲನಾದ ನಿನ್ನನ್ನು ಆನಂದ ಪಡಿಸಲು ನನ್ನಿಂದ ಏನು ತಾನೇ ಸಾಧ್ಯವಾದೀತು? ನೀನಾಡುವುದೆಲ್ಲಾ ಕೇವಲ ನಿನ್ನ ಭಕ್ತವಾತ್ಸಲ್ಯದಿಂದ ಬರುವ ನುಡಿಗಳೇ!

ಕೃ—ಮಹಾತ್ಮರಾದ ತಮ್ಮ ಸಂದರ್ಶನದಿಂದ ನಾನು ಕೃತಾರ್ಥನಾದೆನು.

ನಾ—ಪರಮಾತ್ಮ, ಹದಿನಾಲ್ಕು ಲೋಕಕ್ಕೂ ಒಡೆಯನಾದ ನಿನ್ನ ವೈಭವವನ್ನು ನೋಡುವ ಸುಯೋಗವು ನನಗೆ ಈಗ ದೊರೆತದ್ದರಿಂದ ನನ್ನ ಜನ್ಮವು ಸಾರ್ಥಕವಾಯಿತು. ಈಚೆಗೆ ನಿನ್ನ ದರ್ಶನವು ದೊರಕುವುದೇ ದುರ್ಲಭವಾಗಿದೆ.

ಕೃ—ಇದು ಹಾಗಿರಲಿ. ನಾರದರೇ, ಇದೇನು ಮೇಲೆ ಮೇಲೆ ನನ್ನ ನಾಮದ ಪ್ರಶಂಸೆ?

ನಾ—ಕೃಷ್ಣ, ಇದಕ್ಕೆ ಪ್ರಬಲವಾದ ಕಾರಣವಿದೆ. ನಾನು ಈಗ ತಾನೇ ಯಮಲೋಕವನ್ನು ನೋಡಿಕೊಂಡು ಬಂದೆನು. ಅಲ್ಲಿ ಅನೇಕ ಜೀವರು ಘೋರನರಕದಲ್ಲಿ ಬಿದ್ದು ಚೀರುತ್ತಿರಲು, ನಾನು 'ನಾರಾಯಣ' ಎಂಬದಾಗಿ ನಾಮಸ್ಮರಣೆ ಮಾಡಿದಮಾತ್ರಕ್ಕೆ ಅವರಿಗೆ ನರಕಪಾಪದಿಂದ ಬಿಡುಗಡೆಯಾಯಿತು. ಹೀಗಿರುವಲ್ಲಿ, ನಿನ್ನ ನಾಮದ ಮಹಿಮೆಯನ್ನು ಎಷ್ಟು ಹೇಳಿದರೂ ಸಾಲದು.

ಕೃ—ನಾರದರೇ, ಅಗಾಧಪಾಪಮಾಡಿ, ನರಕಕ್ಕೆ ಬಿದ್ದಿದ್ದವರನ್ನು ನೀವು ನನ್ನ ನಾಮ ಬಲದಿಂದಲೇ ಉದ್ಧಾರಮಾಡಿದಿರಿ. ಆದರೆ, ಇದಕ್ಕೆ ಕೊನೆಯೆಲ್ಲಿ? ಇದಕ್ಕಿಂತಲೂ ಪಾಪದ ಬೇರನ್ನೇ ಕಡಿಯುವುದು ಶ್ರೇಷ್ಠವಲ್ಲವೇ? ಆದುದರಿಂದ, ನೀವೇ ಭೂಲೋಕದಲ್ಲಿ ಅವತರಿಸಿ ಈ ನನ್ನ ನಾಮಕೀರ್ತನೆ

ಯಿಂದಲೇ ಜನಗಳಿಗೆ ಸದ್ಧರ್ಮವನ್ನು ಬೋಧಿಸಿ ಪಾಪವನ್ನೆ ಸಗದಂತೆ ಮಾಡಿ ಲೋಕೋಪಕಾರವನ್ನು ಮಾಡಿರಿ. ಪ್ರಕೃತ ನಿಮ್ಮ ಕೋರಿಕೆ ಏನಿದ್ದರೂ ನೆರವೇರಿಸಲು ನಾನು ಸಿದ್ಧವಾಗಿರುವೆನು.

ನಾ—ನಾರಾಯಣ, ಯೋಗಿಗಳು ನಿನ್ನ ಅನುಗ್ರಹವನ್ನು ಪಡೆಯಲು ಕಲ್ಪಾಂತರಗಳು ಕಠಿಣ ತಪಸ್ಸನ್ನು ಮಾಡಿದರೂ ನೀನು ಅವರಿಗೆ ದೊರಕುವದೇ ಕಷ್ಟ. ಹೀಗಿರಲು, ನಿನ್ನ ದರ್ಶನವು ನನಗೆ ಲಭಿಸಿರುವುದಕ್ಕಾಗಿ ನಾನೇ ಧನ್ಯನು. ಭಕ್ತಪರಾಧೀನ, ನನ್ನ ಬಯಕೆಯಿನ್ನೇನೂ ಇಲ್ಲ. ಸದಾ ಕಾಲದಲ್ಲಿಯೂ ನಾನು ನಿನ್ನ ನಾಮಸಂಕೀರ್ತನೆಯನ್ನು ಮಾಡುತ್ತಿರಲು ನೀನು ನನ್ನ ಸಂಗಡ ಕುಣಿಯುತ್ತಿರಬೇಕು. ಈ ಶಾಶ್ವತವಾದ ಆನಂದವೆಂಬ ಭಾಗ್ಯವನ್ನು ನನಗೆ ನೀನು ದಯಪಾಲಿಸಬೇಕು.

ಕೃ—ಯೋಗಿವರ್ಯರೇ, ನಿಮ್ಮ ಇಷ್ಟಾರ್ಥವನ್ನು ನಾನು ಬಹಳ ಸಂತೋಷದಿಂದ ಕೈಗೂಡಿಸುವೆನು. ಅದಕ್ಕೆ ಸರಿಯಾದ ಬೇರೊಂದು ಕಾಲವು ಬಂದೊದಗುವುದು. ಕಲಿಯುಗದಲ್ಲಿ ಧರ್ಮವು ಮಲಿನವಾಗಿ ಜನಗಳು ಅಕೃತ್ಯಗಳನ್ನೆಸಗುತ್ತಾ ದುರ್ಮಾರ್ಗ ಪ್ರವರ್ತಕರಾಗುವರು. ಆಗ, ಭೂಮಂಡಲದಲ್ಲಿ ಮೆರೆಯುವ ಕರ್ಣಾಟಕದೇಶಕ್ಕೆ ಸೇರಿದ ಪುರಂದರ ಗಡದಲ್ಲಿ ನೀವು ಜನ್ಮವನ್ನೆತ್ತಿ ಧರ್ಮದ ಸಾರವನ್ನು ಪಂಡಿತ ಪಾಮರರೆಲ್ಲರಿಗೂ ತಿಳಿಯುವಂತೆ ಹರಡುತ್ತಾ ಬನ್ನಿ. ಆ ಸಮಯದಲ್ಲಿ, ನಿಮ್ಮ ಇಷ್ಟಾರ್ಥವನ್ನು ನಾನು ನೆರವೇರಿಸುವೆನು.

ನಾ—ಪರಮಾತ್ಮ, ಅಧರ್ಮಾಧಿಕ್ಯವಾದ ಕಲಿಯುಗದಲ್ಲಿ ನಾನು ಪುನಃ ಭೂಲೋಕದಲ್ಲಿ ಜನ್ಮವನ್ನೆತ್ತಿ ನಿನ್ನನ್ನು ಮರೆಯಬೇಕೋ ?

ಕೃ—ನಾರದರೇ, ಚೆನ್ನಾಯಿತು. ಅಧರ್ಮಾಧಿಕ್ಯವಾಗುವುದರಿಂದಲೇ, ಲೋಕಹಿತಕ್ಕೋಸ್ಕರ ನೀವು ವೈಕುಂಠವನ್ನು ಬಿಟ್ಟು ಭೂಲೋಕದಲ್ಲಿದ್ದು ಧರ್ಮಪ್ರಸಾರಕ ಕಾರ್ಯವನ್ನು ಮಾಡಬೇಕು. ನನ್ನ ಕಾರ್ಯವೂ ಅದೇ. ನನ್ನಿಂದ ಪ್ರೇರಿತರಾಗಿ ನನ್ನ ಕಾರ್ಯವನ್ನು ಮಾಡಿದರೆ, ನನಗೆ ಬಹಳ ಸಂತೋಷವಾಗುವುದು. ಅಂತಹ ದೇವಕಾರ್ಯಧುರಂಧರರಿಗೆ ಒದಗಬಹುದಾದ ಅಜ್ಞಾನವನ್ನು ದೂರಮಾಡಲು ನಾನು ಸಿದ್ಧನಾಗಿರುವೆನು.

ನಾ—ಭಗವಂತ, ನಿನ್ನ ದಿವ್ಯಸಂಕಲ್ಪವು ಯಾವರೀತಿ ನೆರವೇರುವುದೋ ಯಾರಿಗೂ ತಿಳಿಯದು. ಯಾವಾಗಲೂ ನಿನ್ನ ನಾಮವೆಂಬ ದಿವ್ಯರತ್ನವು ನನ್ನನ್ನು ಎಡಬಿಡದಂತೆ ಅನುಗ್ರಹಿಸು.

ಶ್ಲೋಕ || ರಂಗಾನಂಗಪಿತಾ ರಜೋತ್ತಮಗುಣಾ ರಾಜೀವ ಫುಲ್ಲೇಕ್ಷಣಾ |
ಗಾಂಗೇಯಾಂಬರ ಹಾರನೂಪುರಲಸತ್ಕಾಂಚೀಲತಾಶೋಭಿತಾ ||
ಸಂಗೀತಪ್ರಿಯಸಾರ ಸನ್ಮುನಿಗಣಾ ಸಂಗಾ ಅಸಂಗಾ ಅಜ/
ಗಂಗಾತಾತ ವಿಹಂಗನಾಥಗಮನ ಶೃಂಗಾರ ಸಾರಾತ್ಮಕಾ||

(ಥರದೆಯು ಬೀಳುವುದು)

**ಪೀಠಿಕಾನೋಟ ಮುಗಿದುದು.**



# ಪ್ರ ಸ್ತಾ ವ ನೆ

[ ಸೂತ್ರಧಾರನು ಪ್ರವೇಶಿಸಿ ನಾಂದೀಸ್ತೋತ್ರವನ್ನು ಹಾಡುವನು ]

ಸೂತ್ರಧಾರ—

ಚಂ.ವೃ|| ಗಳಿಸುತಪಾರಭಾಗ್ಯ ನವಕೋಟಿ ಧನಾಧಿಪನಾಗಿ ಲೋಕದೊಳ್ |

ಜಲರುಹನೇತ್ರಸಂಮರತು ಲೌಕಿಕದಲ್ಲಿರೆ ನೋಡು ತೀತನಂ ||

ಸೆಳೆಯುವೆ ಪಾರಮಾರ್ಥಿಕಕೆ ಮೇಣ್ ಜಗದಭ್ಯುದಯಕ್ಕೆನುತ್ತಲಾ |

ಗೊಲಿದನಿಮಿತ್ತಬಾಂಧವ, ದಯಾನಿಧಿ, ಪಾಲಿಸಲೆಮ್ಮ ವಿಟ್ಠಲಂ || ೧ ||

**ರಾಗ ಆರಭಿ ಆದಿತಾಳ**

ಶ್ರೀನಿಕೇತನ ಪಾಲಯಮಾಂ | ಶ್ರೀನಿಕೇತನ || ಪ ||

ಜ್ಞಾನಗಮ್ಯ ಕರುಣಾನಿಧಿ ನಿನ್ನಡಿ |

ಗಾನಮಿಸುವೆ ಪೊರೆ ದೀನದಯಾಳೊ || ಅನು ||

ಜ್ಞಾನಮಾನದ ಶರಣರ ಸುರ | ಧೇನು ಸರ್ವದ||

ನೀನೆಂದರಿತು ಸದಾನುರಾಗದಲಿ |

ಧ್ಯಾನಿಪೆ ಮನದನುಮಾನವ ಕಳೆಯೊ || ೧ ||

ಶ್ರೀಕರಾರ್ಚಿತ ಪಾದಾಬ್ಜಪ | ರಾಕು ಅಚ್ಯುತ |

ಶೋಕನಾಶ ವಿಶೋಕ ಜನಕಹೃ |

ದ್ವ್ಯಾಕುಲ ಕಳೆಯೊ ಕೃಪಾಕರ ಪೊರೆದು || ೨ ||

ಪನ್ನಗಾಚಲ ನಿವಾಸ ಪ್ರ | ಸನ್ನ ವತ್ಸಲ |

ಬಿನ್ನಪಕೇಳೊ ಜಗನ್ನಾಥ ವಿಟ್ಠಲ |

ಧನ್ಯನಮಾಡೊ ಶರಣ್ಯ ಶರಣನ || ೩ ||

ಆಹಾ, ಪರಮಾತ್ಮನು ಭಕ್ತ ಪರಾಧೀನನೆಂಬ ಮಾತು ನಿಜವಾದುದೇ ಸರಿ. ಇದಕ್ಕಾಗಿ ಆತನೇ ಎಷ್ಟು ನಿದರ್ಶನಗಳನ್ನು

ತೋರಿಸಿರುತ್ತಾನೆ ! ಪೂರ್ವಯುಗಗಳಲ್ಲಿ ಪ್ರಹ್ಲಾದ, ಧ್ರುವ, ಇವರೇ ಮೊದಲಾದ ಭಕ್ತರನ್ನು ಉದ್ಧರಿಸಿದ ವಿಷಯವು ಹಾಗಿರಲಿ.

ಈ ಕಲಿಯುಗದಲ್ಲಿಯೂ ಕೂಡ ಪರಮ ಭಕ್ತರಾದ ಪುರಂದರ ದಾಸರಿಗೊಲಿದು ಅವರಿಂದ ಲೋಕೋಪಕಾರವನ್ನು ಮಾಡಿಸಿದ ಸಂಗತಿಯು ಯಾರಿಗೆ ತಾನೇ ತಿಳಿದಿಲ್ಲ ? ಪರಮ ಪೂಜ್ಯರಾದ ನಾರದ ಮಹಾಮುನಿಗಳು ಭಗವದಾಜ್ಞೆಯಂತೆ ಭೂಲೋಕದಲ್ಲಿ ಅವತಾರಮಾಡಿ, ತಮಗೆ ಲಬ್ಧವಾದ ನವ ಕೋಟಿಧನದಿಂದ ತಾತ್ಕಾಲಿಕವಾಗಿ ಮತ್ತರಾಗಿ ಪರಮಾತ್ಮನನ್ನು ಮರೆತಿರಲು, ತನ್ನ ಭಕ್ತರಿಗೆ ಆವರಿಸಿದ ಮಾಯೆಯನ್ನು ಪರಿಹರಿಸುವುದರಲ್ಲ ಸದಾ ಸಿದ್ಧನಾದ ಶ್ರೀಮನ್ನಾರಾಯಣನು ವಿಪ್ರರೂಪದಿಂದ ಬಂದು ತನ್ನ ಮಾಯಾಶಕ್ತಿಯಿಂದ ಸಾಹುಕಾರನನ್ನು ವಿಭ್ರಮೆಗೊಳಿಸಿ ಕೊನೆಗೆ ಅವರಿಗೆ ವೈರಾಗ್ಯವು ಹುಟ್ಟಿ ತನ್ನ ಚರಣಾರವಿಂದದ ದಾಸನಾಗುವಂತೆ ಅನುಗ್ರಹಿಸಿದ ಪ್ರಸಂಗವು ಅತ್ಯಂತ ಭಕ್ತಿಯುತವಾಗಿರುವುದರಲ್ಲಿ ಸಂದೇಹ ವಿಲ್ಲ. ಇಂತಹ ಸಚ್ಚರಿತ್ರೆಯನ್ನು ಕುತೂಹಲ ಪಿತಿಷ್ಟರಾಗಿ ನೆರೆದಿರತಕ್ಕ, ಹಾಗೂ ನಾನಾ ಕಲಾ ವಿಚಕ್ಷಣರಾದ, ಸಭಿಕರ ಮುಂದೆ ನಾಟಕರೂಪವಾಗಿ ಅಭಿನಯಿಸಿ ಅವರನ್ನು ಆನಂದಗೊಳಿಸ ಬೇಕೆಂದಿರುವೆನು. ಇದಕ್ಕಾಗಿ ಪಾತ್ರಗಳನ್ನು ಸಿದ್ಧಪಡಿಸಲು ಪಾರಿಪಾರ್ಶ್ವಕನಿಗೆ ಹೇಳಿಬಂದಿದ್ದೆನು. ಆತನು ಇಷ್ಟುಹೊತ್ತಾಗಿಯೂ ಬರಲಿಲ್ಲವಲ್ಲಾ.

(**ತೆರೆಯ ಕಡೆನೋಡಿ**) ಓಹೋ, ನಾನು ಮನಸ್ಸಿನಲ್ಲಿ ನೆನೆಯುವಷ್ಟರಲ್ಲಿಯೇ ಇಲ್ಲಿ ಬರುತ್ತಿರುವನು. ನನ್ನ ಪ್ರಯತ್ನವು ಸಫಲವಾಗುವುದೆಂಬುದಕ್ಕೆ ಇದು ಶುಭಸೂಚನೆಯೇ ಸರಿ.

(**ಪಾರಿಪಾರ್ಶ್ವಕನು ಬರುವನು**)

ಸೂತ್ರ—ಎಲೈ, ಪಾರಿಪಾರ್ಶ್ವಕನೇ!

ಪಾರಿ—ಆರ್ಯನೆ, ನಿನ್ನ ಆಜ್ಞೆಯಂತೆಯೇ ಎಲ್ಲವನ್ನೂ ಸಜ್ಜುಗೊಳಿಸಿ ಬಂದಿರುವೆನು.

ಸೂತ್ರ—ಹಾಗಾದರೆ, ಇನ್ನು ಕಾಲವಿಳಂಬವೇಕೆ ?

(ತೆರೆಯೊಳಗೆ, ನಡುಗುವ ಕಂಠದಿಂದ)-ಸ್ವಾಮಿಾ ಸಾಹುಕಾರ್ರೇ, ಸ್ವಾಮಿಾ ಸಾಹುಕಾರ್ರೇ!

ಸೂತ್ರ—ಓಹೋ, ವೃದ್ಧ ಬ್ರಾಹ್ಮಣನು ಆಗಲೇ ಸಾಹುಕಾರನನ್ನು ನೋಡಲು ಆತುರನಾಗಿ ಬರುತ್ತಿರುವನು. ಇನ್ನು ನಾವಿಲ್ಲಿರುವುದು ಸರಿಯಲ್ಲ.

(ಇಬ್ಬರೂ ಹೊರಡುವರು)

(ಇದು ಪ್ರಸ್ತಾವನೆ)



# ಪುರಂದರದಾಸರು

## ಪ್ರಥಮಾಂಕ

### — ಮೊದಲನೆಯ ನೋಟ —

**(ಸಾಹುಕಾರನ ಅಂಗಡಿಯ ಮುಂಭಾಗ—ಇಬ್ಬರು ಸೇವಕರು ನಿಂತಿರುವರು—ಒಬ್ಬ ವೃದ್ಧನಾದ ಬಡಬ್ರಾಹ್ಮಣನು ಪ್ರವೇಶಿಸುವನು**

ಬ್ರಾಹ್ಮಣ—(ನಡುಗುತ್ತಾ) ಸ್ವಾಮಿ, ಸಾಹುಕಾರರೇ ಸ್ವಾಮಿ, ಸಾಹುಕಾರರೇ,

ಸೇವಕರು—ಯಾರದು?

ಬ್ರಾಹ್ಮಣ—ಎಲ್ಲಪ್ಪಾ, ಸಾಹುಕಾರರು? ಈ ದಿನವಾದರೂ ಸಾಹುಕಾರರ ದರ್ಶನ ಮಾಡಿಸುವುದಿಲ್ಲವೇನಪ್ಪಾ?

೧ನೇ ಸೇವಕ—ಈ ಬ್ರಾಹ್ಮಣನನ್ನು ನೋಡಿದರೆ, ಬಲು ಬಡವನಂತಿದ್ದಾನೆ. ೮-೧೦ ದಿನಗಳಿಂದ ದಿನಾ ಬರುತ್ತಿದ್ದಾನೆ.

೨ನೇ ಸೇವಕ—ಬ್ರಾಹ್ಮಣನ ತಾಪತ್ರಯ ಬಲು ಹೆಚ್ಚಾಗಿರಬೇಕು, ಇಲ್ಲದಿದ್ದರೆ, ಬೇಸರಿಲ್ಲದೆ ಹೀಗೆ ತಪ್ಪದೆ ದಿನಾಲು ಬರುತ್ತಿರಲಿಲ್ಲ.

೧ನೇ ಸೇ—ಬ್ರಾಹ್ಮಣನು ಬಹಳ ಮುದುಕ. ನಡೆದು ನಡೆದು ಬಲು ಆಯಾಸ ಪಟ್ಟಿದ್ದಾನೆ.

೨ನೇ ಸೇ—ವಯಸ್ಸಾಗಿದ್ದರೂ ಬ್ರಾಹ್ಮಣನ ಮುಖದ ಮೇಲೆ ಒಳ್ಳೆಯ ಕಳೆ ಇದೆ. **(ಇವರು ಹೀಗೆ ಮಾತನಾಡುತ್ತಿರುವಲ್ಲಿ ಬ್ರಾಹ್ಮಣನು ಅಂಗಡಿಯೊಳಕ್ಕೆ ಮುಂದೆಮುಂದೆ ಹೆಜ್ಜೆಯನು ಇಡುತ್ತಿರುವನು.**

೧ನೇ ಸೇ—ಓಹೋ, ಬ್ರಾಹ್ಮಣನು ಮುಂದಕ್ಕೇ ಹೊರಟ **ಈತನನ್ನು ಬಿಟ್ಟರೆ ನಮ್ಮ ಯಜಮಾನರು ಏನು ಮಾಡುವರೋ ಕಾಣೆ.**

ಎಸೇ ಸೇ—ನಾವೇಕೆ ಅಡ್ಡಿ ಮಾಡೋಣ? ಬ್ರಾಹ್ಮಣನ ಅದೃಷ್ಟವಿದ್ದಂತೆ ಆಗಲಿ. ಯಜಮಾನರು ನಮಗೆ ಏನಾದರೂ ಶಿಕ್ಷೆಯನ್ನು ಕೊಡಲಿ.

(ಬ್ರಾಹ್ಮಣನು ಅಂಗಡಿಯೊಳಕ್ಕೆ ಪ್ರವೇಶಿಸುವನು. ಸೇವಕರು ಪಕ್ಕಗಳಲ್ಲಿ ನಿಲ್ಲುವರು. ಸಾಹುಕಾರನ ಅಂಗಡಿಯ ಒಳಭಾಗದಲ್ಲಿ ನಾಯಕನು ವ್ಯಾಪಾರಮಾಡುತ್ತಾ ಕುಳಿತಿರುವನು. ಒಬ್ಬ ಗುಮಾಸ್ತೆಯು ಲೆಕ್ಕ ಬರೆಯುತ್ತಿರುವನು. ಅನೇಕ ಜನಗಳು ವ್ಯಾಪಾರಕ್ಕಾಗಿ ಬಂದು ಹೋಗುತ್ತಿರುವರು. ಒಬ್ಬ ಗಿರಾಕಿಯು ಒಂದು ಜೊತೆ ಓಲೆಯನ್ನು ವ್ಯಾಪಾರ ಮಾಡುವನು.)

ಗಿರಾಕಿ—ಸಾಹುಕಾರರೇ, ಈ ಓಲೆಯ ಬೆಲೆಯೇನು?

ನಾಯಕ—ಐನೂರು ವರಹ.

ಗಿ—ಕಡಮೆ ಬೆಲೆಗೆ ಸಿಕ್ಕಲಾರದೋ?

ನಾ—ಇಲ್ಲ.

ಗಿ—ನೀವು ಹೇಳುವ ಬೆಲೆಯು ಹೆಚ್ಚು. ಸ್ವಲ್ಪ ಕಡಮೆ ಮಾಡಿ ಕೊಡಿ.

ನಾ—ಸ್ವಲ್ಪವೂ ಕಡಮೆಯಾಗಲಾರದು. ಬೇಕಾದರೆ ಹೇಳಿದ ಧಾರಣೆಗೆ ತೆಗೆದುಕೊಳ್ಳಬಹುದು. ಇಲ್ಲದಿದ್ದರೆ ಓಲೆಯನ್ನು ಕೊಟ್ಟು ಹೊರಡಿ.

ಗಿ—ಬೆಲೆಯಲ್ಲಿ ಸ್ವಲ್ಪ ಕಡಮೆಮಾಡಿದರೆ ಮತ್ತೆ ಇತರ ಒಡವೆಗಳನ್ನು ಕೊಳ್ಳಬೇಕಾದರೂ ನಿಮ್ಮಲ್ಲಿಗೇ ಬರುವೆನು.

ನಾ—(ಬಹಳ ದರ್ಪದಿಂದ) ಅನೇಕ ಗಿರಾಕಿಗಳು ಕಾದಿರುವರು ನಿಮ್ಮೊಡನೆ ವ್ಯರ್ಥವಾಗಿ ಇಷ್ಟು ಹೊತ್ತು ಕಾಲಹರಣ ಮಾಡಿದ್ದಾಯಿತು. ಓಲೆಯನ್ನು ಇಲ್ಲಿ ಕೊಡಿ.

(ಮುಂದೆ ಮುಂದೆ ಹೆಜ್ಜೆಯಿಡುತ್ತಾ ಬ್ರಾಹ್ಮಣನು ಸಾಹುಕಾರನ ಬಳಿಗೆ ಬರುವನು. ಬ್ರಾಹ್ಮಣನಿಗೂ ನಾಯಕನಿಗೂ ಸಂಭಾಷಣೆಯಾಗುತ್ತಿರುವಾಗ ಗಿರಾಕಿಗಳು ಒಬ್ಬೊಬ್ಬರಾಗಿ ಹೊರಡುವರು.)

ಬ್ರಾ—ಸ್ವಾಮಿಾ, ನೀವೇನೋ ಸಾಹುಕಾರರು?

ನಾ—ಹೌದು ಏನು ಬೇಕು?

ಬ್ರಾ—ನಮ್ಮ ಮನೆಯಲ್ಲಿ ಶುಭಕಾರ್ಯ ನೆರವೇರಬೇಕಾಗಿದೆ.

ನಾ—ಏನಾದರೂ ರತ್ನದ ಮತ್ತು ಭಂಗಾರದ ಒಡವೆಗಳು ಬೇಕೋ?

ಬ್ರಾ—ಕೊಟ್ಟರೆ ನಿಮ್ಮ ಪುಣ್ಯ, ನನ್ನ ಕಾರ್ಯವನ್ನು ನೆರವೇರಿಸಿ ಕೊಳ್ಳುತ್ತೇನೆ.

ನಾ—ಯಾವಯಾವ ಒಡವೆಗಳು ಬೇಕು? ಬೆಲೆಯು ಎಷ್ಟರ ಲ್ಲಿರಬೇಕು? ಬೇಗ ತಿಳಿಸಿ.

ಬ್ರಾ—ಮಹಾರಾಯ, ಧರ್ಮಕ್ಕೆ ನೀವು ಕೊಡುವಾಗ ಬೆಲೆ ಇಷ್ಟೆಂದು ನಾನೇನು ಹೇಳಲಿ? ನಿಮಗೆ ಇಷ್ಟಬಂದುದನ್ನು ದಾನ ಕೊಡಬಹುದು. ಪುಣ್ಯ ಬರುತ್ತದೆ.

ನಾ—(ಆಶ್ಚರ್ಯದಿಂದ) ಇದೇನು ಮಾತು? ಅರ್ಥವಾಗುವ ಹಾ ಗಿಲ್ಲ. ಬಂದ ಉದ್ದೇಶವೇನು? ಹೇಳಿ.

ಬ್ರಾ—ಅಪ್ಪಾ, ಸಾಹುಕಾರರೇ! ನನ್ನ ಮಗನಿಗೆ ಬ್ರಹ್ಮೋಪ ದೇಶ ಮಾಡಬೇಕು. ನನಗೆ ವಯಸ್ಸಾಗಿಹೋಯಿತು. ಮನೆಯಲ್ಲಿ ಮಧ್ಯಾಹ್ನಕ್ಕೆ ಭುಕ್ತಕ್ಕೆ ಮಾರ್ಗವಿಲ್ಲ. ಮಹಾ ರಾಯರು ನಿಮ್ಮಂತಹವರು ಧರ್ಮ ಮಾಡಿ ನನ್ನನ್ನು ದ್ಧಾರ ಮಾಡಬೇಕು. ಏನಾದರೂ ಸಹಾಯ ಮಾಡುವಿ ರೆಂಬ ಭರವಸೆಯಿಂದ ಇಲ್ಲಿಗೆ ಬಂದೆ.

ನಾ—(ರೇಗುತ್ತಾ) ಛೇ, ಈ ತಿರಪಗಾರ ಬ್ರಾಹ್ಮಣನನ್ನು ಇಲ್ಲಿಗೆ ಬಿಟ್ಟವರಾರು?

ಬ್ರಾ—ನಾನು ೮-೧೦ ದಿನಗಳಿಂದಲೂ ಇಲ್ಲಿಗೆ ಬರುತ್ತಿದ್ದೇನೆ. ಆದರೆ, ಒಳಗೆ ಬರಗೊಡಿಸದೆ ಸೇವಕರು ಅಡ್ಡಿಮಾಡುತ್ತಿ ದ್ದರು. ಈ ದಿನ ಮಾತ್ರ ನನ್ನ ಅದೃಷ್ಟ - ನಿಮ್ಮ ದರ್ಶ ನವು ಲಭಿಸಿತು.

ನಾ—ಅಯ್ಯಾ ಬ್ರಾಹ್ಮಣ, ನಮ್ಮಲ್ಲೇನೂ ಸಹಾಯವು ದೊರಕಲಾರದು.

ಬ್ರಾ—ತಮ್ಮಂತಹ ಮಹನೀಯರೇ ಈ ರೀತಿ ಹೇಳಿದರೆ ನಮ್ಮಂತಹ ಬಡವರ ಗತಿಯೇನು? ತಾವು ದೊಡ್ಡ ಮನಸ್ಸಿನಿಂದ ಸ್ವಲ್ಪವಾದರೂ ಸಹಾಯ ಮಾಡುವರೆಂದು ನಂಬಿದ್ದೇನೆ.

ನಾ—ಏನಯ್ಯಾ, ಬಹಳ ಬೇಸರ ಪಡಿಸುತ್ತೀಯೆ! ಸುಮ್ಮನೆ ಹೊರಡು.

ಬ್ರಾ—ಉದಾರಹೃದಯರಾದ ನಿಮಗೆ ನಾನು ಕೇಳುವುದೇನೂ ಒಂದು ದೊಡ್ಡದಲ್ಲ. ಅಷ್ಟು ರತ್ನಸಮೂಹಗಳಲ್ಲಿ ನಾನು ಕೇಳುವ ರತ್ನವೊಂದನ್ನು ಕೊಟ್ಟರೆ, ನನಗೆ ತೃಪ್ತಿಯಾಗುವುದು. ನಿಮಗೂ ಪುಣ್ಯವು ಬರುವುದು.

ನಾ—ಎಲಾ, ಬಡಬ್ರಾಹ್ಮಣಾ, ಒಳ್ಳೆಯ ರತ್ನಕ್ಕೇ ಏಟು ಹಾಕಿದೆಯಲ್ಲಾ! ಹೊರಟುಹೋಗು.

ಬ್ರಾ—ಈ ನನ್ನ ಅದೃಷ್ಟದಿಂದ ದರ್ಶನವೇನೋ ಲಭಿಸಿತು. ಆದರೆ, ರಿಕ್ತಹಸ್ತನಾಗಿ ಹೋಗೆಂದು ನೀವು ಅಪ್ಪಣೆ ಮಾಡಿದರೆ, ಕಲ್ಪವೃಕ್ಷವು ಬಳಿಯಲ್ಲಿದ್ದರೂ ಉಪವಾಸವಿದ್ದಂತಾಗುತ್ತದೆ. ದಯವಿಟ್ಟು ಮನ್ನಿಸಿ ಉಪಕಾರಮಾಡಬೇಕು.

ನಾ—(**ಗುಮಾಸ್ತೆಯ ಕಡೆ ತಿರುಗಿ**) ಈ ಬ್ರಾಹ್ಮಣನು ನನ್ನನ್ನು ಜಿಗಣೆಯಂತೆ ಹಿಡಿದಿರುವನು. ನಾಣ್ಯಗಳನ್ನು ತುಂಬಿರುವ ಎರಡು ಚೀಲಗಳನ್ನು ತಂದು ನನ್ನೆದುರಿಗೆ ಸುರಿ.

(**ಗುಮಾಸ್ತೆಯು ಒಳಗಿನಿಂದ ಚೀಲವನ್ನು ತಂದು ನಾಣ್ಯಗಳನ್ನು ಸುರಿಯುವನು. ಬ್ರಾಹ್ಮಣನು ಬಹು ಆತುರದಿಂದ ಆರಿಸಿಕೊಳ್ಳ ಲೆಕ್ಕಿಸುವನು.**)

ನಾ—ಎಲಾ, ಬ್ರಾಹ್ಮಣಾ, ನಿನಗೇಷ್ಟು ದುರಾಶೆ? ಎರಡು ದುಗ್ಗಾಣಿಯನ್ನೇ ನಾನು ನಿನಗೆ ಕೊಡುವುದು.

ಬ್ರಾ— ಸಾಹುಕಾರರೇ, ಒಡತನವು ಬಹು ಕಷ್ಟ. ಏನು ಮಾಡುವುದು? ತಮ್ಮಂತಹ ಅಗರ್ಭ ಶ್ರೀಮಂತರಿಗೆ ಈ ಕಷ್ಟವು ಗೊತ್ತಾಗುವದಿಲ್ಲ.

ಸಾ—ನಿನ್ನ ತತ್ವೋಪದೇಶ ಸಾಕು. ಸುಮ್ಮನೆ ಎರಡು ದುಗ್ಗಾಣಿಯನ್ನು ಮಾತ್ರ ತೆಗೆದುಕೊಂಡು ಹೊರಟುಹೋಗು ಇನ್ನು ಕಾಡಿಸಬೇಡ.

ಬ್ರಾ— ಮಹರಾಯರೇ, ಇಷ್ಟಾದರೂ ದಯಪಾಲಿಸಿಗುತ್ತಿರಲ್ಲ! ನಿಮಗೆ ಎಷ್ಟೋ ಪುಣ್ಯ. (ನಾಣ್ಯಗಳನ್ನು ಅಲ್ಲಿಯೇ ಬಿಟ್ಟು ಬ್ರಾಹ್ಮಣನು ಹೊರಟುಹೋಗುವನು. ಇನ್ನು ಕೆಲವು ಗಿರಾಕಿಗಳು ಬಂದು ವ್ಯಾಪಾರಮಾಡುತ್ತಿರುವರು)

(ಘಂಟೆಯು ಬೀಳುವುದು)



## — ಎರಡನೆಯ ನೋಟ —

(ನಾಯಕನ ಮನೆಯ ಒಳಭಾಗ—ಅಂಗಳ ಸಾಹುಕಾರನ ಹೆಂಡತಿಯು ಭಕ್ತಿಯಿಂದ ತುಳಸೀ ಪೂಜೆಮಾಡುತ್ತಿರುವಳು. ಕೆಲವು ಮುತ್ತೈದೆಯರು ಬಂದು ಕೂತಿರುವರು. ಬ್ರಾಹ್ಮಣನು ಪ್ರವೇಶಮಾಡಿ ಇವರಿಗೆ ಕಾಣದಂತೆ ಒಂದೆಡೆ ನಿಂತು ನೋಡುತ್ತಿರುವನು. ಸಾಹುಕಾರನ ಹೆಂಡತಿಯು ಹಾಡನ್ನು ಹೇಳಿಕೊಂಡು ತುಳಸಿಗೆ ಆರತಿಯನ್ನೆತ್ತುವಳು)

ಸಾ. ಹೆಂ—

ರಾಗ ಮುಖಾರಿ

* ಮಂಗಳಾರತಿ ಎತ್ತಿರೇ | ನಿತ್ಯ | ಸುಮಂಗಳೆಗತಿಶಯದೀ ||ಪ|| ಮಂಗಳಾರತಿಯೆತ್ತಿ | ತುಂಗ ಮಹಿಮಶ್ರೀ|ರಂಗನ ರಾಣಿಗೆ | ಅಂಗನೆ ತುಳಸಿಗೆ ||ಅನು||

ಕಡಲೊಳುಸುಧೆ ಹಿಡಿದೂ | ಬಂದನು | ಕಡುಕರುಣೆಯು ಒಲಿದೂ || ಕುಡಿಗಣ್ಣಿನಜಲ ಸಡಿಲಲು ಕಲಶದಿ || ಒಡನೆ ಜನಿಸಿದಂಥ | ಮಡದಿ ಶ್ರೀತುಳಸಿಗೆ ||೧||

ಸುರರು ಪೂಜಿಸುಳಿಗರೆಯೋ | ಹರುಷದಿ | ಹರಿಯು ಕರವ ಪಿಡಿಯೋ || ವರವನು ಪಡೆದಳು | ಶರಣರ ಪೊರೆಯಲು | ಧರೆಯೊಳು ಬಂದಿಹ | ಕರುಣಿ ಶ್ರೀತುಳಸಿಗೆ ||೨||

ಭಕುತಿಯಿಂದಲಿ ನಿತ್ಯ | ಸೇವಿಪ | ಸಕಲಜನಕೆ ಸತ್ಯ | ಭಕುತಿಮುಕುತಿಯಿತ್ತು | ಸುಕೃತರವಾಡುವ | ಲಕುಮಿಕಾಂತನ ಪ್ರೇಮದಾ | ಸಕುತೆ ಶ್ರೀತುಳಸಿಗೆ ||೩||

(ಅನಂತರ ಆಕೆಯು ತುಳಸಿಗೆ ನಮಸ್ಕಾರಮಾಡಿ ಬಂದಿದ್ದ ಮುತ್ತೈದೆಯರಿಗೆ ಅರಿಸಿನ ಕುಂಕುಮ ನೈವೇದ್ಯ ಇವುಗಳನ್ನು ಕೊಡುವಳು. ಮುತ್ತೈದೆಯರು ಒಬ್ಬರೊಬ್ಬರಾಗಿ ಹೊರಟುಹೋಗುವರು)

ಬ್ರಾಹ್ಮಣ— (ಆತ್ಮಗತ) ಸಾಹುಕಾರನನ್ನಂತೂ ಪರೀಕ್ಷಿಸಿದ್ದಾಯಿತು. ಈ ಗಂಡ ಹೆಂಡರಗೆಷ್ಟು ಅಂತರ! ಎಷ್ಟು ಭಕ್ತಿಯಿಂದ ತುಳಸೀ ಪೂಜೆಮಾಡುತ್ತಿರುವಳು! ಈಕೆಯ ಮೂಲಕ ಸಾಹುಕಾರನಿಗೆ ಜ್ಞಾನೋದಯವನ್ನು ಮಾಡಿಸುವೆನು. (ಗಟ್ಟಿಯಾಗಿ) 'ಭವತೀ ಭಿಕ್ಷಾಂ ದೇಹಿ'

(ಸಾಹುಕಾರನ ಹೆಂಡತಿಯು ಒಳಗಿನಿಂದ ಬಂದು ಬ್ರಾಹ್ಮಣನಿಗೆ ನಮಸ್ಕರಿಸುವಳು)

ಬ್ರಾ—ದೀರ್ಘಸುಮಂಗಲೀಭವ.

ಹೆಂ—ಪೂಜ್ಯರ ದರ್ಶನದಿಂದ ನಾನು ಕೃತಾರ್ಥಳಾದೆನು.

ಬ್ರಾ—ನಿಮ್ಮ ತುಳಸೀಪೂಜೆಯನ್ನು ನೋಡಿ ನನಗೆ ಆನಂದವಾಯಿತು. ನಿಮಗಿರುವ ದೈವಭಕ್ತಿ, ಅತಿಥಿ ಸತ್ಕಾರ ಇವು ಶ್ಲಾಘನೀಯವಾಗಿವೆ. ಆದುದರಿಂದಲೇ ನಿಮಗೆ ದೇವರು ಇಷ್ಟು ಭಾಗ್ಯವನ್ನು ಕೊಟ್ಟಿರುತ್ತಾನೆ.

ಹೆಂ—ಎಲ್ಲವೂ ತಮ್ಮಂತಹವರ ಆಶೀರ್ವಾದದ ಬಲ. ಆದರೆ, ಇದು ಕ್ಷಣಿಕ ಭಾಗ್ಯ. ಭಗವಂತನ ಸೇವೆಯೆಂಬ ಶಾಶ್ವತ ಭಾಗ್ಯವನ್ನು ಕಳೆದುಕೊಳ್ಳದಂತೆ ಸತ್ಪುರುಷರು ಎಚ್ಚರಿಸಬೇಕೆಂಬುದೇ ನನ್ನ ಹಾರೈಕೆ.

ಬ್ರಾ—ನಿಮ್ಮ ವಿವೇಕದ ನುಡಿಗಳನ್ನು ಕೇಳಿ ನನ್ನ ಕುತೂಹಲವು ಹೆಚ್ಚುತ್ತಿರುವುದು. ನನ್ನ ಮಗನಿಗೆ ಎಂಟು ವರ್ಷ ವಯಸ್ಸಾಗಿದೆ. ಇನ್ನೂ ಬ್ರಹ್ಮೋಪದೇಶವಿಲ್ಲ. ಪ್ರತಿದಿನವೂ ಭಿಕ್ಷೆಮಾಡಿ ಹೊಟ್ಟೆ ಹೊರೆಯುವುದಾಗಿದೆ. ಮನೆಯಲ್ಲಿ ಜೀವನಕ್ಕೆ ಒಪ್ಪೊತ್ತಿಗಿದ್ದರೆ ಇನ್ನೊಪ್ಪೊತ್ತಿಗಿಲ್ಲ. ಬ್ರಹ್ಮೋಪದೇಶಕ್ಕೆ ಆಗಲೇ ಕಾಲಾತೀತವಾಯಿತು. ಆದರೆ, ದ್ರವ್ಯ ಶಕ್ತಿಯಿಲ್ಲ. ಇದಕ್ಕೇ, ಶ್ರೀಮಂತರಾದ ತಮ್ಮಲ್ಲಿ ಯಾಚನೆಮಾಡಲು ಇಲ್ಲಿಗೆ ಬಂದೆ.

(**ಹೆಂಗಸು ಸ್ವಲ್ಪ ಆಲೋಚನೆ ಮಾಡುತ್ತಿರುವಳು**)

ಬ್ರಾ—ನೀವು ಬಹಳ ಧನಿಕರು. ದೈವಭಕ್ತಿಯುಳ್ಳವರು. ನಿಜವಾಗಿಯೂ ದ್ರವ್ಯ ಸಹಾಯ ಮಾಡುವಿರೆಂದು ನನಗೇನೋ ನಂಬಿಕೆ.

ಹೆಂ—ನಾನು ಹೆಂಗಸು. ಹಣಕಾಸನ್ನು ಕೊಡಲು ನನಗೆ ಏನೂ ಸ್ವಾತಂತ್ರ್ಯವಿಲ್ಲ.

ಬ್ರಾ—ಹಾಗಿದ್ದರೆ, ನೀವು ಇಟ್ಟಿರುವ ಅನೇಕ ಆಭರಣಗಳಲ್ಲಿ ಯಾವುದಾದರೊಂದು ಒಡವೆಯನ್ನು ಕೊಟ್ಟರೂ ಸಾಕು.

ಹೆಂ—ಈ ಒಡವೆಗಳೂ ನನ್ನವಲ್ಲ. ಎಲ್ಲಾ ನನ್ನ ಪತಿಗೆ ಸೇರಿದುವು.

ಬ್ರಾ—ನನಗೆ ಹೆಚ್ಚು ಬೆಲೆಯ ಒಡವೆಗಳನ್ನು ಕೊಡದಿದ್ದರೂ ತಮ್ಮ ಮೂಗಿನಲ್ಲಿರುವ ಮೂಗುತಿಯನ್ನು ಕೊಟ್ಟರೆ ಸಾಕು ಬಹು ಸಹಾಯ ಮಾಡಿದಂತಾಗುವುದು.

ಹೆಂ—(**ಸ್ವಲ್ಪ ಆಲೋಚಿಸಿ**)ಸರಿ, ಇದು ನನ್ನ ತವರುಮನೆಯಲ್ಲಿ ಕೊಟ್ಟದ್ದು. ಆದರಿಂದ ತಮಗೆ ಪ್ರಯೋಜನವಾಗುವಲ್ಲಿ ಅಗತ್ಯವಾಗಿ ತೆಗೆದುಕೊಡುವೆನು.

ಬ್ರಾ—ನೀವು ದೊಡ್ಡಮನಸ್ಸುಮಾಡಿ ಇದನ್ನು ಕೊಟ್ಟರೆ ಸಾಕು. ನಿಮ್ಮ ಧರ್ಮಬುದ್ಧಿಗೆ ತಕ್ಕಂತೆ ದೇವರು ಅನುಗ್ರಹಿಸುವನು.

(ಹೆಂಗಸು ಮೂಗುತಿಯನ್ನು ತೆಗೆದು ಬ್ರಾಹ್ಮಣನ ಕೈಗೆ ಕೊಡುವಳು ಬ್ರಾಹ್ಮಣನು ಅದನ್ನು ತನ್ನ ಧೋತ್ರದ ಗಂಟಿನಸೆರಗಿನಲ್ಲಿ ಕಟ್ಟಿಕೊಂಡು ಹೊರಡಲುದ್ಯುಕ್ತನಾಗುವನು ಹೆಂಗಸು ನಮಸ್ಕರಿಸುವಳು)

ಬ್ರಾ—ನಿಮಗೆ ಮಂಗಳವಾಗಲಿ.

(ಬ್ರಾಹ್ಮಣನು ಹೊರಟು ಹೋಗುವನು. ಹೆಂಗಸು ಒಳಕ್ಕೆ ಹೋಗುವಳು.)



## —ಮೂರನೆಯ ನೋಟ—

(ಸಾಹುಕಾರನ ಅಂಗಡಿ— ಸಾಹುಕಾರನು ಕುಳಿತಿರುವನು— ಬ್ರಾಹ್ಮಣನ ಪ್ರವೇಶ)

ನಾಯ—ಏನು ಪುನಃ ಬಂದಿರಿ ?

ಬ್ರಾ—ಏನೂ ಇಲ್ಲ. ನಿಮ್ಮಲ್ಲಿ ಸ್ವಲ್ಪ ಕೆಲಸವಿತ್ತು.

ನಾ—(ಜುಗುಪ್ಸೆಯಿಂದ) ಏನು, ನಿಮ್ಮ ತಾಪತ್ರಯವನ್ನೂ ನಿಮ್ಮ ಆಶೆಯನ್ನೂ ನೋಡಿದರೆ, ನನ್ನಲ್ಲಿರುವ ದುಡ್ಡನ್ನೆಲ್ಲಾ ಕೊಟ್ಟರೂ ಸಾಲದೆಂದು ತೋರುತ್ತದೆ.

ಬ್ರಾ—ನಿಮ್ಮ ಮನಸ್ಸನ್ನು ನಾನು ಚೆನ್ನಾಗಿ ಬಲ್ಲೆ. ಅಂತಹಕಾಲವು ಬಂದರೆ, ನೀವು ಆಗತ್ಯವಾಗಿ ಕೊಟ್ಟೇಕೊಡುವಿರಿ.

ನಾ—ನಿಮ್ಮ ಮನಸ್ಸನ್ನು ನಾನೂ ಬಲ್ಲೆ. ನಮ್ಮಂತಹವರಲ್ಲಿ ಪದೇ ಪದೇ ಯಾಚಿಸಿ ಸಕಲವನ್ನೂ ಸುಲಿಗೆಮಾಡಿ ನಿಮ್ಮ ಜೊತೆಗೆ ಸೇರಿಸಿಕೊಳ್ಳುವುದೇ!

ಬ್ರಾ—ಏನುಮಾಡುವುದು ? ನಮ್ಮ ಸಂಕಲ್ಪವೇ ಹೀಗೆ! ನಮಗೆ ಕೊಟ್ಟಷ್ಟೂ ತಮ್ಮ ಭಾಗ್ಯವು ಹೆಚ್ಚುವುದು.

ನಾ—ನೀವು ಮಾತಿನಲ್ಲಿ ಬಹು ಚಮತ್ಕಾರಿಗಳು. ಅದು ಹಾಗಿರಲಿ. ಈಗ ಬಂದ ಕೆಲಸವೇನು? ಹೇಳಿ. ಓಹೋ ನೀವು ಇಲ್ಲಿಯೇ ಮರೆತಿದ್ದ ಎರಡು ದುಗ್ಗಾಣಿಗಳನ್ನು ತೆಗೆದುಕೊಂಡು ಹೋಗಲು ಬಂದಿರೋ ?

ಬ್ರಾ—ಅದೆಲ್ಲಿ ಹೋಗುತ್ತದೆ, ಸಾಹುಕಾರರೇ? ಈಗ ನಾನು ನಿಮ್ಮಲ್ಲಿಗೆ ಬೇರೊಂದು ಕೆಲಸಕ್ಕೆ ಬಂದೆ.

ನಾ—ಅದೇನು? ಅಂತಹ ಕೆಲಸ? ಇನ್ನೇನನ್ನು ಕೊಡೆಂದು ಕೇಳುವಿರಿ?

ಬ್ರಾ—ನಾವು ಬಲವಂತಮಾಡಿ ಕೇಳದಿದ್ದರೆ ಸುಮ್ಮನೆ ತಾನಾಗಿ ತಂದು ಯಾರು ತಾನೇ ಕೊಡುವರು? ಅದು ಹಾಗಿರಲಿ, ಈಗ ನನ್ನಲ್ಲಿ ಒಂದು ಒಡವೆಯಿದೆ. ತಮ್ಮಂತಹ ಒಬ್ಬ ದೊಡ್ಡ ಸಾಹುಕಾರರ ಮನೆಯಲ್ಲಿ ಅದನ್ನು ನನಗೆ ದಾನ ಕೊಟ್ಟರು. ಅದನ್ನು ಬೆಲೆಗೆ ತೆಗೆದು ಕೊಳ್ಳುವಿರಾ?

ನಾ—ಎಲ್ಲಿ, ನೋಡೋಣ ಏನು ಒಡವೆ?

ಬ್ರಾ—ಒಂದು ಮೂಗುತಿ. ಅದು ಬಹಳ ಅಮೌಲ್ಯವಾದುದು. ಅದನ್ನು ನೀವು ಎಷ್ಟಕ್ಕೆ ತೆಗೆದುಕೊಳ್ಳುವಿರಿ?

ನಾ—ಒಡವೆಯನ್ನು ಕಣ್ಣಿಂದ ನೋಡದೆ ಹೇಗೆ ಹೇಳುವುದು?

ಬ್ರಾ—ಹಾಗಾದರೆ ಒಡವೆಯನ್ನು ಕೊಡಲೇ ?

ನಾ—(ಸ್ವಲ್ಪ ಸಿಟ್ಟಿನಿಂದ) ನೀವು ಹೇಳುವ ಮಾತು ಆಶ್ಚರ್ಯವಾಗಿದೆ. ಒಡವೆಯನ್ನು ಪ್ರತ್ಯಕ್ಷವಾಗಿ ನೋಡದೆ ಬೆಲೆ ಕಟ್ಟುವುದು ಹೇಗೆ ?

ಬ್ರಾ—ತಾವು ಎಷ್ಟೋ ನೋಡಿರುವಿರಿ !

ನಾ—ಆದರೂ ಒಡವೆಯ ಯೋಗ್ಯತೆಯು ಇಂತಹುದೆಂದು ತಿಳಿಯದೆ ಇದಕ್ಕೆ ಸರಿಯಾದ ಬೆಲೆಯನ್ನು ಹೇಳಲು ಯಾರಿಂದಲೂ ಸಾಧ್ಯವಾಗಲಾರದು.

ಬ್ರಾ—ನಿಜ ಆದರೆ ಇದನ್ನು ನೋಡಿದ ಮೇಲೆ ನೀವು ಸರಿಯಾದ ಬೆಲೆಯನ್ನು ಕಟ್ಟುವಿರೋ ಇಲ್ಲವೋ?

ನಾ—ನೀವು ಬರೀ ಕಾಲಹರಣ ಮಾಡುತ್ತಿದ್ದೀರಿ. ವಡವೆಯನ್ನು ತೋರಿಸಿ. ಇಲ್ಲವಾದರೆ ಹೊರಡಿ.

(ಬ್ರಾಹ್ಮಣನು ಮೂಗುತಿಯನ್ನು ತನ್ನ ಧೋತ್ರದ ಸೆರಗಿನ ಗಂಟಿನಿಂದ ತೆಗೆದು ಕೊಡುವನು. ನಾಯಕನು ಅದನ್ನು ತನ್ನ ಕೈಯಲ್ಲಿಟ್ಟು ಕೊಂಡು ನೋಡುತ್ತಾ ಆಶ್ಚರ್ಯಪಡುವನು)

ಬ್ರಾ—ಇದು ಬಹು ಉತ್ಕೃಷ್ಟವಾದ ವಡವೆ. ಚೆನ್ನಾಗಿ ನೋಡಿ ಇದಕ್ಕೆ ತಕ್ಕ ಬೆಲೆಯನ್ನು ಹೇಳಿ.

(ನಾಯಕನು ವಡವೆಯ ಕಡೆಯೂ ಬ್ರಾಹ್ಮಣನ ಕಡೆಯೂ ಮೇಲೆ ಮೇಲೆ ನೋಡುತ್ತಾ ಬೆರಗಾಗುವನು)

ಬ್ರಾ—ಏನು ಸಾಹುಕಾರರೇ, ಇದರ ಬೆಲೆಯನ್ನು ಕಟ್ಟಲು ಸಾಧ್ಯವಿಲ್ಲವೋ? ನಾನು ಎಲ್ಲಾ ಚಿನಿವಾರರ ಹತ್ತಿರವೂ ಹೋಗಿದ್ದೆ. ಇದಕ್ಕೆ ತಕ್ಕ ಬೆಲೆಯನ್ನು ಕಟ್ಟಲು ಯಾರಿಂದಲೂ ಸಾಧ್ಯವಾಗಲಿಲ್ಲ. ಆದುದರಿಂದ ನಿಮ್ಮ ಬಳಿಗೇ ಬಂದು ಇದಕ್ಕೆ ಸರಿಯಾದ ಬೆಲೆಯನ್ನು ಕಟ್ಟಿಸಿ ವಿಕ್ರಯಮಾಡಲು ಬಂದೆ.

ನಾ—(ಆತ್ಮಗತ) ಇದೇನು ಆಶ್ಚರ್ಯವಾಗಿದೆ! ಇರಲಿ. (ಬ್ರಾಹ್ಮಣನೊಡನೆ) ಇದನ್ನು ನಾನು ಚೆನ್ನಾಗಿ ಪರೀಕ್ಷಿಸಬೇಕು. ಈಗ ಅವಕಾಶವಿಲ್ಲ ಇದನ್ನು ಇಲ್ಲಿ ನನ್ನ ಬಳಿಯೇ ಬಿಟ್ಟು ಹೋಗಿ. ನಾಳೆ ಅದರ ಸರಿಯಾದ ಬೆಲೆಯನ್ನು ಹೇಳುವೆನು.

ಬ್ರಾ—ವಡವೆಗಳ ವ್ಯಾಪಾರದಲ್ಲಿ ಬಹು ಮಿಗಿಲಾದ ಅನುಭವವಿರುವ ನಿಮಗೂ ಇದರ ಗುಣವನ್ನು ಕಂಡುಹಿಡಿಯಲು ಸುಲಭವಿಲ್ಲದಿರಲು ಇತರರಿಂದೇನಾದೀತು? ಆಗಲಿ, ನಿಮಗೆ ಬೇಕಾದಷ್ಟು ಅವಕಾಶಕೊಡುವೆನು. ವಡವೆಯ ಯೋಗ್ಯತೆಯನ್ನು ಸಾವಕಾಶದಿಂದ ಸರಿಯಾಗಿ ಪರೀಕ್ಷಿಸಿ.

ಆಮೇಲೆ ನಿರ್ವಂಚನೆಯಾಗಿ ಇದರ ನ್ಯಾಯವಾದ ಬೆಲೆಯನ್ನು ಕಟ್ಟಿ. ಈ ಒಡವೆಯು ನಿಮ್ಮಲ್ಲಿಯೇ ಇರಲಿ. ಹೇಗಾದರೂ ಇದನ್ನು ನಿಮಗೇ ವಿಕ್ರಯಿಸಬೇಕೆಂದು ನನ್ನ ಸಂಕಲ್ಪ. ನಾನು ಹೊರಡುವೆನು. ನೀವು ಮಾತ್ರ ಮರೆಯದೆ ಇದನ್ನು ಸರಿಯಾಗಿ ಪರೀಕ್ಷಿಸಿ ಇದರ ಗುಣವನ್ನು ಕಂಡು ಹಿಡಿಯಿರಿ. ನನ್ನ ಇಷ್ಟವು ನೆರವೇರುವುದೆಂದು ನನಗೆ ನಂಬಿಕೆಯಿದೆ- ನಾನು ಹೊರಡಲೇ?

ನಾ—ಹೋಗಬಹುದು. ಪುನಃ ಯಾವಾಗ ಬರುವಿರಿ?

ಬ್ರಾ—ನೀವು ಇದರ ಸರಿಯಾದ ಬೆಲೆಯನ್ನು ತಿಳಿದುಕೊಂಡೊಡನೆಯೇ ನಾನು ಬರುವೆನು. ಈಗ ನಾನು ಹೊರಡುತ್ತೇನೆ.

ನಾ—ಆಗಲಿ. ಹೊರಡಿ, ಬೇಕಾದರೆ-ನಿಮಗೆ ಆತುರವಿದ್ದರೆ- ಈಗ ಸ್ವಲ್ಪ ಹಣವನ್ನು ಕೊಡುವೆನು.

ಬ್ರಾ—ಅದರ ಬೆಲೆಯನ್ನೆಲ್ಲಾ ಒಟ್ಟಿಗೇ ತೆಗೆದುಕೊಳ್ಳುವೆನು. ಆದರೆ, ಯಾವನೋ ಬಡಬ್ರಾಹ್ಮಣನು ತಂದು ಕೊಟ್ಟ ಒಡವೆಯೆಂದು ಅಲಕ್ಷ್ಯಮಾಡದೆ ದಯವಿಟ್ಟು ಸ್ವಲ್ಪ ತೊಂದರೆಯನ್ನು ತೆಗೆದುಕೊಂಡು ಅದರ ನಿಜವಾದ ಯೋಗ್ಯತೆಯನ್ನು ಕಂಡುಹಿಡಿಯಿರಿ

ನಾ—ಆಗಬಹುದು. ಹೊರಡುವಿರೋ ?

(ಬ್ರಾಹ್ಮಣನು ಹೊರಡುವನು. ಪುನಃ ಹಿಂದಿರುಗಿ)

ಬ್ರಾ—ನಾನು ಮರೆತೆ, ನಿಮಗೆ ಇನ್ನೊಂದು ಮಾತನ್ನು ಹೇಳಬೇಕಾಗಿತ್ತು.

ನಾ—ಅದೇನು ?

ಬ್ರಾ—ಇನ್ನೇನೂ ಇಲ್ಲ. ನಾನು ಕೊಟ್ಟದ್ದನ್ನು ಕಳೆಯದಂತೆ ಜೋಪಾನವಾಗಿಟ್ಟಿರಬೇಕೆಂದು ನನ್ನ ಪ್ರಾರ್ಥನೆ.

ನಾ—(ನಗುತ್ತಾ) ಇದಕ್ಕಾಗಿ ಹಿಂತಿರುಗಿದಿರಾ? ದೊಡ್ಡ

ದೊಡ್ಡ ವಡವೆಗಳ ವ್ಯಾಪಾರವಮಾಡುವ ಕೋಟ್ಯಾಧಿಕಾರಿ ಯಾದ ನನಗೆ ಈ ಅಲ್ಪವಾದ ಮೂಗುತಿಯ ವಿಷಯದಲ್ಲಿ ಎಚ್ಚರಿಸಲು ಪುನಃ ಬಂದಿರೊ?

ಬ್ರಾ—ಹಾಗಲ್ಲ, ಸಾಹುಕಾರರೇ. ತಾವು ಕೇವಲ ಧನಿಕರು. ನಾನು ವಿಕ್ರಯಮಾಡಬೇಕೆಂದಿರುವ ಸಣ್ಣ ಪದಾರ್ಥವು ತಮಗೆ ಅಲ್ಪವಾಗಿ ಕಾಣುವುದೇನೂ ಆಶ್ಚರ್ಯವಲ್ಲ. ಬಹು ಸಿರಿಯುಳ್ಳವರಿಗೆ ಈ ಮೂಗುತಿಯು ಕಣ್ಣಿಗೆ ಕಾಣುವುದೇ ಇಲ್ಲ. ಅಲ್ಲದೆ, 'ಮೂಕುತಿಯು' ಬಹು ಸುಲಭವಾದ ವಡವೆ ಯಾದುದರಿಂದ ತಮ್ಮಂತಹವರು ಅದನ್ನು ಬಹು ಬೇಗ ಕಳೆದುಕೊಳ್ಳುವುದುಂಟು. ಅದಕ್ಕೋಸ್ಕರ, ಎಚ್ಚರಿ ಸಲು ಬಂದೆನು.

ನಾ—ಅದೂ ನಿಜವೇ. ನೀವು ಹೇಳಿದಂತೆ ಮೂಗುತಿಯೇನೋ ಬಹು ಸಣ್ಣವಡವೆ. ಆದರೂ ಅದು ಕಳೆದು ಹೋಗದಂತೆ ನೋಡಿಕೊಳ್ಳುವೆನು.

ಬ್ರಾ—ನನ್ನ ಇಷ್ಟವೂ ಅಷ್ಟೆ. ಇನ್ನು ನಾನು ಹೊರಡುವೆನು.

**ಎಂದು ಹಿಂದಕ್ಕೆ ನೋಡಿಕೊಂಡು ನೋಡಿಕೊಂಡು ಹೋಗುವನು.**

ನಾ—(**ಮೂಗುತಿಯನ್ನು ಕೈಯಲ್ಲಿಟ್ಟುಕೊಂಡು ಪರೀಕ್ಷಿಸುತ್ತಾ**) ಈ ಮೂಗುತಿಯನ್ನು ನೋಡಿದರೆ ನನ್ನ ಹೆಂಡತಿಯದೇ ಇದ್ದಂತೆ ಕಾಣುತ್ತದೆ. ಇದು ಈ ಬ್ರಾಹ್ಮಣನ ವಶಕ್ಕೆ ಹೇಗೆ ಬಂತು? ನನ್ನ ಹೆಂಡತಿಯು ಕೊಟ್ಟಿದ್ದಾಳೆಯೋ? ಇಲ್ಲ- ಕೊಡಲು ಅವಳಿಗೇನು ಸ್ವಾತಂತ್ರ್ಯವಿರುವುದು?

ಹಾಗಿದ್ದರೆ, ಇದು ನನ್ನ ಹೆಂಡತಿಯ ಮೂಗುತಿಯಲ್ಲದೇ ಇರಬಹುದೇ? ಆಹಾ, ಈಗ ಚೆನ್ನಾಯಿತು. ರತ್ನಗಳ ಪರೀ ಕ್ಷೆಯಲ್ಲಾಗಲೀ, ವಡವೆಗಳ ಬೆಲೆಯನ್ನು ನಿರ್ಧರಿಸುವುದರಲ್ಲಾ ಗಲೀ ಏನು ಅನುಮಾನ ಬಂದರೂ ಅದನ್ನು ಪರಿಹಾರಮಾಡಿ

ಕೊಳ್ಳಲು ಸುತ್ತುಮುತ್ತಲವರೆಲ್ಲರೂ ನನ್ನ ಬಳಿಗೇ ಬಂದು ತಿಳಿದುಕೊಂಡು ಹೋಗುವರು. ಇಷ್ಟುದಿನ ಇವುಗಳ ವ್ಯಾಪಾರದಲ್ಲಿಯೇ ಮಗ್ನನಾಗಿ, ರತ್ನಗಳ ಪರೀಕ್ಷೆಯಲ್ಲಿ ನನಗೆ ಯಾರೂ ಸಮರಿಲ್ಲವೆಂದೆನ್ನಿಸಿಕೊಂಡು ನನ್ನ ಹೆಂಡತಿಯ ಮೂಗುತಿಯನ್ನೇ ಗುರುತು ಹಿಡಿಯದಮೇಲೆ ನನ್ನ ಪಾಂಡಿತ್ಯಕ್ಕೆ ಒಳ್ಳೆಯ ಮರ್ಯಾದೆ ಬಂತು!

(**ಎಂದು ಪುನಃ ಆ ಮೂಗುತಿಯನ್ನು ನೋಡಿ**) ಸರಿ, ಇದು ನನ್ನ ಹೆಂಡತಿಯದೇ ಎಂಬುದರಲ್ಲಿ ಏನೂ ಅನುಮಾನವಿಲ್ಲ. ಆದರೆ ಇದು ಈ ಬ್ರಾಹ್ಮಣನಲ್ಲಿಗೆ ಹೇಗೆ ಬಂತೆಂಬುದು ಗೊತ್ತಾಗಲಿಲ್ಲವಲ್ಲಾ. ಆತನನ್ನೇ ಕೇಳಬೇಕಾಗಿತ್ತು. ಈಗಲಾದರೇನು? ವೃದ್ಧನು ಮೆಲ್ಲಗೆ ನಡೆಯುತ್ತಿರಬಹುದು. ಅವನನ್ನು ಕರೆದುಕೊಂಡುಬರಲು ಸೇವಕರನ್ನು ಕಳುಹಿಸುವೆನು - ಎಲಾ, ಯಾರು ಹೊರಗೆ?

(**ಇಬ್ಬರು ಸೇವಕರ ಪ್ರವೇಶ**)

ಸೇವಕರು—ಬುದ್ಧೀ, ಏನಪ್ಪಣೆ?

ನಾ—ಈಗ ಬಂದಿದ್ದ ಬ್ರಾಹ್ಮಣ ದಾರಿಯಲ್ಲಿ ಮೆಲ್ಲಗೆ ಹೋಗುತ್ತಿರಬಹುದು. ನೀವು ಬೇಗ ಹೋಗಿ ಆತನನ್ನು ಇಲ್ಲಿಗೆ ಕರೆದುಕೊಂಡು ಬನ್ನಿ.

ಸೇ—ಅಪ್ಪಣೆ

(**ಸೇವಕರು ಓಡಿಹೋಗುವರು**)

ನಾ—ಬ್ರಾಹ್ಮಣನು ಮೂಗುತಿಯನ್ನು ಕದ್ದುಕೊಂಡು ಬಂದಿರಬಹುದೇ? ಎಂದಿಗೂ ಇರಲಾರದು. ಆತನು ಕಳ್ಳನಾಗಿದ್ದರೆ, ನಮ್ಮ ಮನೆಯ ಒಡವೆಯನ್ನು ಕದ್ದು ಅದನ್ನು ವಿಕ್ರಯಮಾಡಲು ನನ್ನ ಬಳಿಗೇ ಬರುತ್ತಿದ್ದನೆ? ಬ್ರಾಹ್ಮಣನು ಬಂದಲ್ಲದೆ ಒಂದೂ ಬಗೆಹರಿಯುವ ಹಾಗಿಲ್ಲ. ಆಗಲಿ. ಬ್ರಾಹ್ಮಣನು ಬಂದಮೇಲೆ ನೋಡೋಣ.

(ಸೇವಕರು ಬಹಳ ವೇಗದಿಂದ ಪ್ರವೇಶಿಸುವರು)

ನಾ—(ಆತುರದಿಂದ) ಏನು ಬ್ರಾಹ್ಮಣನು ಸಿಕ್ಕಿದನೆ?

ಸೇ—ಸಿಕ್ಕಿದನು.

ನಾ—ಸಿಕ್ಕಿದನೋ? ಸರಿ. ಹಾಗಾದರೆ ಅವನೆಲ್ಲಿ?

ಸೇ—ಅವನು ಬಂದಿಲ್ಲ

ನಾ—ಏಕೆ ? ಬರುವುದಿಲ್ಲವೆಂದನೆ ?

ಸೇ—ಇಲ್ಲ.

ನಾ—ನೀವು ಹೇಳುವುದೇನು? ಆ ಬ್ರಾಹ್ಮಣನು ಸಿಕ್ಕಿದರೂ ಏಕೆ ಕರೆತರಲಿಲ್ಲ ?

ಸೇ—(ನಡುಗುತ್ತಾ) ಕರೆತರಬಹುದಾಗಿತ್ತು. ಆದರೆ ಒಂದು ವಿಚಿತ್ರವಾದ ಸಂಗತಿಯು ನಡೆಯಿತು.

ನಾ—ಅದೇನು ? ಬೇಗಹೇಳಿ.

೧ನೇ ಸೇ—ಬುದ್ಧೀ, ತಮ್ಮ ಅಪ್ಪಣೆ ಮೇರೆಗೆ ಇಲ್ಲಿಂದ ನಾವಿಬ್ಬರೂ ಓಡಿ ಹೋದೆವು. ಸ್ವಲ್ಪದೂರದಲ್ಲಿಯೇ ಆ ಬ್ರಾಹ್ಮಣನನ್ನು ಕಂಡೆವು.

ನಾ—ಹಾಗಿದ್ದರೆ. ಆತನನ್ನು ಏಕೆ ಕರೆದುಕೊಂಡು ಬರಲಿಲ್ಲ?

೨ನೇ ಸೇ—ಬ್ರಾಹ್ಮಣನು ಬಹಳ ಮೆಲ್ಲಗೆ ಹೆಜ್ಜೆಯನ್ನಿಡುತ್ತಿದ್ದನು. ನಾವೂ ಆತನನ್ನು ಹಿಂಬಾಲಿಸಿದೆವು.

ನಾ—ಆಮೇಲೆ ?

೧ನೇ ಸೇ—ಆಮೇಲೆ ಬ್ರಾಹ್ಮಣನನ್ನು ಸ್ವಲ್ಪ ದೂರದಿಂದಲೇ ಕೂಗಿದೆವು. ಆತನು ಅಲ್ಲಿಯೇ ನಿಂತನು. ಆದರೆ, ನಮ್ಮ ಕಡೆ ಮಾತ್ರ ತಿರುಗಿ ನೋಡಲಿಲ್ಲ. ನಾವು ಬೇಗ ಆತನ ಬಳಿಗೆ ಹೋಗಿ "ಬ್ರಾಹ್ಮಣರೇ, ನಿಮ್ಮನ್ನು ಕರೆತರಲು ನಮ್ಮ ಧಣಿಗಳು ಕಳುಹಿಸಿದ್ದಾರೆ" ಎಂದೆವು.

ನಾ—ಅದಕ್ಕೆ ಆತನೇನೆಂದನು ?

೨ನೇ ಸೇ—ನಾವು ಕೂಗುತ್ತಲೇ ಬ್ರಾಹ್ಮಣನು ತಮ್ಮ ಕಡೆ ತಿರುಗಿದನು. ಒಟ್ಟಿಗೆ ಕೋಟಿಮಿಂಚು ಹೊಳೆದಂತೆ ಬೆಳಕಾಯಿತು. ಬುದ್ಧೀ, ನಮ್ಮನ್ನು ಮನ್ನಿಸಬೇಕು. ನಾವು ಕೈಕಾಲಲ್ಲಾಡಿಸದೇ ನಿಂತೆಡೆಯಲ್ಲಿಯೇ ನಿಂತೆವು. ಆತನು ಪುನಃ ಕಾಣಲೇ ಇಲ್ಲ. ಸುತ್ತಲೂ ತಕ್ಷಣವೇ ಹುಡುಕಿದೆವು. ಎಲ್ಲಿಯೂ ಕಾಣಿಸಲಿಲ್ಲ.

ನಾ—ಇದೇನು ಆಶ್ಚರ್ಯದ ಮಾತು? ಸುಳ್ಳು ಹೇಳುವಿರಾ?

೧ನೇ ಸೇ—ಬುದ್ಧೀ, ಸುಳ್ಳಲ್ಲ. ನಾವು ಸತ್ಯವಾಗಿ ನುಡಿಯುತ್ತೇವೆ. ತಾವೇನಾದರೂ ಶಿಕ್ಷೆಯನ್ನು ಕೊಡಿ. ನಡೆದ ಸಂಗತಿಯೇನೋ ಇದೇ.

ನಾ— (ಚಿಂತಾಕ್ರಾಂತನಾಗಿ ಕೋಪದಿಂದ) ನನ್ನೆದುರಿಗೆ ನಿಲ್ಲಬೇಡಿ. ಹೊರಟು ಹೋಗಿ.

(ಸೇವಕರು ಹೊರಟು ಹೋಗುವರು)

ನಾ—ಇದೇನಿದು? ಒಂದೂ ಬಗೆ ಹರಿಯುವಂತಿಲ್ಲ. ಆಗಲಿ, ಸಧ್ಯಕ್ಕೆ ಈ ಮೂಗುತಿಯನ್ನು ಪೆಟ್ಟಿಗೆಯೊಳಗಿಟ್ಟು ಅದಕ್ಕೆ ಬೀಗಮುದ್ರೆಯನ್ನು ಹಾಕುವೆನು. ನನ್ನ ಹೆಂಡತಿಯನ್ನು ಕೇಳಿದರೆ, ನಿಜವು ಹೊರಬೀಳಬಹುದು.

(ಎಂದು ಮೂಗುತಿಯನ್ನು ಸಂದೂಕದೊಳಗಿಟ್ಟು ಬೀಗ ಹಾಕಿ ಭದ್ರಪಡಿಸುವನು)

ಘರದೆಯು ಬೀಳುವುದು.



## — ನಾಲ್ಕನೆಯ ನೋಟ —

(ಸಾಹುಕಾರನ ಮನೆಯ ಒಳಭಾಗದಲ್ಲಿ ನಾಯಕನ ಹೆಂಡತಿಯು ಇರುವಳು, ನಾಯಕನು ಪ್ರವೇಶಿಸುವನು)

ನಾಯಕ—(ಹೆಂಡತಿಯನ್ನು ದೃಷ್ಟಿಸಿ ನೋಡುತ್ತಾ) ನಾಳೆ ಬರುವ ದೀಪಾವಳೀ ಹಬ್ಬಕ್ಕೆ ನಿನಗೆ ಯಾವುದಾದರೊಂದು ವಜ್ರದ ಒಡವೆಯನ್ನು ಮಾಡಿಸಬೇಕೆಂದಿರುವೆನು. ನಿನಗೇನು ಬೇಕು?

ಹೆಂ— ತಮ್ಮ ಚರಣಾರವಿಂದಗಳ ಸೇವೆಯೇ ನನಗೆ ಅಮೂಲ್ಯವಾದ ಒಡವೆ.

ನಾ— ಅದಂತಿರಲಿ. ಹೋದ ವರ್ಷವೇನೋ ವಜ್ರದ ಓಲೆಗಳನ್ನು ಮಾಡಿಸಿದ್ದಾಯಿತು. ಈಗ ಏನುಮಾಡಿಸೋಣ? (ಎಂದು ಆಕೆಯ ಮುಖವನ್ನೇ ಚೆನ್ನಾಗಿ ನೋಡುವನು) ನಿನ್ನ ಮೂಗಿನಲ್ಲಿ ಮೂಗುತಿಯು ಕಾಣುವುದಿಲ್ಲವಲ್ಲ. ನಿನ್ನ ತೌರುಮನೆಯಿಂದ ತಂದಿದ್ದ ಮೂಗುತಿಯೇನಾಯಿತು?

ಹೆಂ— (ನಡುಗುತ್ತಾ) ಅದರ ತಿರುಪು ಮುರಿದು ಹೋಗಿರುವುದು. ಆದುದರಿಂದ ಅದನ್ನು ಒಳಗಿಟ್ಟಿರುವೆನು.

ನಾ— ಅದೇಕೆ? ನನ್ನ ಕೈಗೆ ಕೊಟ್ಟಿದ್ದರೆ ನಾನು ಅದನ್ನು ಸರಿಪಡಿಸುತ್ತಿರಲಿಲ್ಲವೊ?

ಹೆಂ— ಈ ಸಣ್ಣ ವಿಷಯಕ್ಕೆಲ್ಲಾ ಆಗಲೆ ತೊಂದರೆ ಕೊಡಲು ಇಷ್ಟವಿಲ್ಲದೆ ಆಮೇಲೆ ಯಾವಾಗಲಾದರೂ ತಿಳಿಸೋಣವೆಂದು ಸುಮ್ಮನಿದ್ದೆ.

ನಾ—ಹಾಗಿದ್ದರೆ ಈಗ ಅದನ್ನು ತೆಗೆದುಕೊಂಡು ಬಾ.

(ಹೆಂಡತಿಯು ತಲೆಯನ್ನು ಬಗ್ಗಿಸಿಕೊಂಡು ಸುಮ್ಮನೆ ನಿಂತಿರುವಳು)

ನಾ—ಏಕೆ ಸುಮ್ಮನೆ ನಿಂತಿರುವೆ?

(ಹೆಂಡತಿಯು ಪುನಃ ಸುಮ್ಮನಿರುವಳು)

ನಾ—ನಿನ್ನ ಚರ್ಯೆಗಳನ್ನು ನೋಡಿದರೆ ನೀನು ಹೇಳುವುದೆಲ್ಲಾ

ಸುಳ್ಳೆಂದು ಕಾಣುತ್ತದೆ. ಕೂಡಲೆ ಅದನ್ನು ತೆಗೆದುಕೊಂಡು ಬಾ ಇಲ್ಲದಿದ್ದರೆ...............

(ಒಬ್ಬ ಸೇವಕನು ಆತುರನಾಗಿ ಪ್ರವೇಶಿಸುವನು)

ಸೇ—ಮಹಾಸ್ವಾಮಿ, ಉತ್ತರದೇಶದಿಂದ ಯಾರೋ ದೊಡ್ಡ ಮನುಷ್ಯರು ಒಂದು ಭಾರೀ ಒಡವೆಯನ್ನು ಕೊಂಡುಕೊಳ್ಳಲು ಬಂದಿರುವರು.

ನಾ—ಹಾಗಾದರೆ ಬರುವೆನು ನಡೆ.

(ಸೇವಕನು ಹೊರಡುವನು)

ನಾ—(ಹೆಂಡತಿಯ ಕಡೆ ತಿರುಗಿ) ಇಲ್ಲಿಯೇ ನಿಂತಿದ್ದರೆ ವ್ಯಾಪಾರವು ಕೆಟ್ಟುಹೋಗುವುದು. ಪುನಃ ಬೇಗ ಬರುವೆನು. ಮೂಗುತಿಯನ್ನು ತೆಗೆದಿಟ್ಟಿರು.

(ಎಂದು ಹೊರಟು ಹೋಗುವನು)

ಹೆಂಡತಿ—ಆಹಾ,! ಏನು ವಿಚಿತ್ರ! ಏನೋ ಮಾಡುವುದಕ್ಕೆ ಹೋಗಿ ಮತ್ತೇನೋ ಆಯಿತು. ಬ್ರಾಹ್ಮಣನ ಸ್ಥಿತಿಯನ್ನು ನೋಡಿದರೆ ಎಂತಹ ಕಠಿಣ ಹೃದಯವಾದರೂ ಕರಗುವಂತಿದ್ದಿತು. ಆದುದರಿಂದ ನಾನು ಮೂಗುತಿಯನ್ನು ಕೊಟ್ಟೆನು. ಮೂಗುತಿಯಂತೂ ಪುನಃ ನನ್ನ ಬಳಿಗೆ ಬರುವ ಹಾಗಿಲ್ಲ. ಅಲ್ಲದೆ ದಾನವಾಗಿ ಕೊಟ್ಟ ಪದಾರ್ಥವನ್ನು ಪುನಃ ಎಂದಿಗೂ ಬಯಸಬಾರದು. ನಾನು ಮಾಡಿರುವ ಕಾರ್ಯವು ಪಾಪವೋ ಪುಣ್ಯವೋ ಒಂದೂ ತಿಳಿಯದು. ಹಾಗೆ ಒಂದೂ ತೋಚದೆ ಬ್ರಾಹ್ಮಣನಿಗೆ ಮೂಗುತಿಯನ್ನು ಕೊಟ್ಟು ಬಿಟ್ಟೆನು........ ಅಯ್ಯೋ ಚಪಲವೇ! ಒಡವೆ ಯಾರದು! ಕೊಡುವುದಕ್ಕೆ ಮನುಷ್ಯನಿಗೆ ಸ್ವಾತಂತ್ರ್ಯವೆಲ್ಲಿಯದು?

ನಾನು ಈಗ ನನ್ನ ಪತಿಯೆದುರಿಗೆ ನಿಜವನ್ನು ಹೇಳಿದರೆ, ಬ್ರಾಹ್ಮಣನನ್ನು ಹಿಡಿತರಿಸಿ ಆತನನ್ನು ಹಿಂಸಿಸುವರು. ನನಗೆ

ಅಗಾಧವಾದ ಬ್ರಹ್ಮಹತ್ಯದೋಷವು ಬಂದೊದಗುವುದು. ಈ ರೀತಿ ಬ್ರಾಹ್ಮಣನಿಗೆ ಹಿಂಸೆಯನ್ನುಂಟುಮಾಡುವುದಕ್ಕಿಂತ ಪರಮಾತ್ಮನನ್ನು ಧ್ಯಾನಮಾಡುತ್ತಾ ನಾನೇ ವಿಷವನ್ನು ಭುಂಜಿಸಿ ಆತನ ಪಾದಾರವಿಂದಗಳನ್ನು ಸೇರುವುದು ಉತ್ತಮ.

**(ಎಂದು ಬಟ್ಟಲಿನಲ್ಲಿ ವಿಷವನ್ನು ಹಾಕಿ ಬಟ್ಟಲನ್ನು ಮುಂದಿಟ್ಟು ಕೊಂಡು ಕುಳಿತು ಕೈ ಮುಗಿಯುತ್ತಾ ಪ್ರಾರ್ಥಿಸುವಳು)**

**ರಾಗ ಆನಂದಭೈರವಿ**

ಹರಿನೀನೆ ಗತಿಯೆಂದು | ಕರವಜೋಡಿಸಿ ನಾನು | ಮೊರೆ ಹೊಕ್ಕೆನು ಕಾಯೊ | ಕರಿರಾಜವರದ ||ಪ||

ಶರಣಾಗತರ ದಿವ್ಯ | ಸುರಧೇನು ನೀನೆಂಬ | ಬಿರುದು ಶೋಭಿಸುತಿರೆ | ಕರುಣಾಳುವೆ ನಿನ್ನ ||ಅನು||

ವೃದ್ಧಬ್ರಾಹ್ಮಣ ಬಂದು | ಸದ್ಧರ್ಮವನು ಬೇಡೆ | ಸಿದ್ಧವಾಗಿ ನಾನು | ಇದ್ದ ಮೂಗುತಿಯಿತ್ತೆ || ಕದ್ದ ಕಳ್ಳರತೆರದಿ | ಇದ್ದುದ ಮರೆಸುತ | ಬಿದ್ದು ಹೊರಳಿದರೆ | ಎದ್ದು ಬರುವುದೆಂತು ||೧||

ಅತ್ಯಂತ ಬೇಡಲು | ಇತ್ತು ಮೂಗುತಿಯನ್ನು | ಮತ್ತೆ ಗಂಡನು ಕೇಳೆ | ಸತ್ಯವಡಗಿಸಿದೆ || ಹತ್ತಿದ ಕೋಪದಿ ಹತ್ಯ ಮಾಡುವನೆನ್ನ | ಮತ್ತೇನ ಮಾಡಲು | ಎತ್ತ ತೋರದು ಎನಗೆ ||೨||

ಕಡುಪಾಪಿಯೆಂದೆನ್ನ | ಬಿಡೆನೀನು ಪೊರೆಯದೆ | ಕಡೆಹಾಯಿಸುವರಾರೊ | ಒಡೆಯ ನೀನಲ್ಲದೆ || ತಡವಮಾಡದೆ ವಿಷವ | ಕುಡಿದು ನಿನ್ನಯದಿವ್ಯ | ಅಡಿಗಳ ಸೇರುವೆ | ಕಡಲಶಯನ ರಂಗ ||೩||

**(ಹೀಗೆಂದು ಪ್ರಾರ್ಥಿಸಿ ವಿಷದ ಬಟ್ಟಲನ್ನು ತೆಗೆದುಕೊಂಡು ಅದನ್ನು ತನ್ನ ಬಾಯಿಯ ಸಮೀಪಕ್ಕೆ ಎತ್ತುವಳು. ಆಗ ಮೋ**

ಲಿಂವ "ಟಣ್" ಎಂದು ಬಟ್ಟಲಿನೊಳಗೆ ಮೂಗುತಿಯು ಬೀಳು ವುದು.)

ಹೆಂ—(ಆಶ್ಚರ್ಯದಿಂದ) ಇದೇನೋ ಬಟ್ಟಲಿನೊಳಗೆ ಬಿತ್ತು.

(ಎಂದು ಬಟ್ಟಲಿನೊಳಗೆ ನೋಡುವಳು. ಮೂಗುತಿಯು ಕಾಣಿಸುವುದು. ಅದನ್ನು ಕೈಯಲ್ಲಿ ತೆಗೆದುಕೊಂಡು)

ಆಹಾ ಏನು ಆಶ್ಚರ್ಯ! ಬಟ್ಟಲಿನಲ್ಲಿ ಮೂಗುತಿ! ನನ್ನ ಮೂಗುತಿಯೇ! ಇದು ದೈವಲೀಲೆಯೇ ಸರಿ. ಪರಮಾತ್ಮಾ, ನಿಜವಾಗಿಯೂ ನೀನೇ ಆಪದ್ಬಾಂಧವ!

ರಾಗ ಬಿಲಹರಿ

[ಧಾಟಿ—"ರತುನ ದೊರಕಿತಲ್ಲಾ" ಎಂಬಂತೆ]

ಮುಕುತೀ ದೊರಕಿತಲ್ಲ | ಎನಗೆ ಏವ್ಯ | ಮುಕುತೀ ದೊರಕಿತಲ್ಲ ||ಪ||

ಮುಕ್ತಿದೊರಕಿತು ಎನಗೆ ನಿನ್ನನು | ಭಕ್ತಿಯಿಂದಲಿ ಬೇಡುತಿರೆ ಬಹು | ಯುಕ್ತಿಮಾಡಿದೆ ನಿನ್ನ ಪೊಗಳಲು | ಶಕ್ತಿ ಸಾಲದು ಭಕ್ತವತ್ಸಲ ||ಅ||

ನಿಗಮಗೋಚರ ನಿನ್ನನ್ನು | ಬ್ರಹ್ಮಾದಿಸುರರು ಬಗೆಬಗೆ ಸ್ತುತಿಸಲಿನ್ನು | ಏನೊಂದನರಿಯದ | ಮಗು ವ ಬಾಧಿಸೆ ದೆತ್ಯನು | ಭಜಿಸುತ್ತ ನಿನ್ನನು || ನಗಧರನೆ ಸರ್ವತ್ರವ್ಯಾಪಕ | ಜಗದುದರ ಬಾರೆಂದು ಕರೆಯಲು | ಮಗುವಿಗೊಲಿದುದ ಕೇಳಿತವಪದ | ಯುಗವ ಬಿಡದಲೆ ನಾನು ತುತಿಸಲು ||೧||

ನಾರಿಯು ಸಭೆಯೊಳಗೆ | ದುರುಳನು ತನ್ನ | ಸೀರೆಯ ಸೆಳೆಯುತಿರೆ | ಪತಿಗಳ ನೋಡೆ | ವೀರರು ಸುಮ್ಮನಿರೆ | ಬೇರೊಂದು ತೋರದೆ || ಮೂರುಲೋಕದಿ ನಿನ್ನ ಹೊರತಿನ್ನಾರು ಕಾಯುವರಿಲ್ಲವೆನುತಲಿ | ಚೀರಲಕ್ಷಯ ವಸ್ತ್ರ ನೀಡಿದ | (ಆ) ಪಾರಮಹಿಮನೀನೆಂದು ಬೇಡಲು ||೨||

ಎಷ್ಟು ಜನುಮದ ಪುಣ್ಯದಿ । ನೀನೆನಗೊಲಿದೆ । ಎಷ್ಟು ಧನ್ಯಳು ನಾನಾದೆ । ಬಂದೊದಗಿದ್ದ । ಕಷ್ಟ ಪರಿಹರಿಸಿದೆ । ಉದ್ಧರಿಸಿದೆ ॥ ಸೃಷ್ಟಿಗೊಡೆಯನೆ ದೇವ ನಿನ್ನಯ । ಗುಟ್ಟು ತಿಳಿಯದೆ ಜನರು ಬಹು ಪರಿ । ಕಷ್ಟಪಡುತಿಹರಲ್ಲದಲೆನೀ । ನೆಷ್ಟು ಸುಲಭನೆಂಬುದನು ತೋರಲು ॥೩॥

(ಫರದೆಯು ಬೀಳುವುದು)

## — ಐದನೆಯ ನೋಟ —

(ಒಂದು ಬೀದಿ—ಸೇವಕರಿಬ್ಬರೂ ಪ್ರವೇಶಿಸುವರು)

೧ನೇ ಸೇ—ಏನಯ್ಯಾ, ನಮ್ಮ ಸಾಹುಕಾರರು ಇಷ್ಟು ಸಿಟ್ಟು ಮಾಡಿದಾರೆ?

೨ನೇ ಸೇ—ಸಿಟ್ಟೊಂದೇ ಅಲ್ಲ. ಅದೇನೋ ಅವರಿಗೆ ಈಗ ಸಮಾಧಾನವೇ ಇಲ್ಲ.

೧ನೇ ಸೇ—ಒಂದು ದಿನವೂ ನಮ್ಮ ಮೇಲೆ ಕೋಪ ಮಾಡಿದ ಮಹಾರಾಯರಲ್ಲ.

೨ನೇ ಸೇ—ಸಾಹುಕಾರರಿಗೆ ಮನಸ್ಸಿಗೇನೋ ಬೇಸರವುಂಟಾಗಿದೆ.

೧ನೇ ಸೇ—ಹೌದಯ್ಯಾ, ಮಾತನಾಡಿಸುವುದಕ್ಕೆ ಹೋದರೆ, ಮೇಲೇ ಬೀಳ್ತಾರೆ.

೨ನೇ ಸೇ—ನಿಜವಯ್ಯಾ, ಬ್ರಾಹ್ಮಣ ಏನಾದರೂ ಮಾಡಿದ್ದಾನೋ?

೧ನೇ ಸೇ—ಬ್ರಾಹ್ಮಣ ಏನುಮಾಡಿದ, ಪಾಪ? ಆತನನ್ನು ಕರೆದುಕೊಂಡು ಬರಲಿಲ್ಲವೆಂದು ಸಾಹುಕಾರಿಗೆ ನಮ್ಮ ಮೇಲೆ ಕೋಪ.

೨ನೇ ಸೇ—ಹೌದಯ್ಯ....ಆದರೆ, ಅದಕ್ಕೆ ನಾವೇನು ಮಾಡೋಣ? ಪುನಃ ಹಿಂದಕ್ಕೆ ಬರಲಿಲ್ಲವೆಂದು ಅದೇಕೆ ಸಾಹುಕಾರರು ಅಷ್ಟು ಬಲವಂತ?

೧ನೇ ಸೇ—ಏನೋ ಅವನು ತಿರುಪಕ್ಕೆ ಬಂದಿದ್ದನು. ಏನಾದರೂ ಅವನಿಗೆ ಕೊಟ್ಟು ಕಳುಹಿಸೋಣವೆಂದಿರಬಹುದು.

೨ನೇ ಸೇ—ಅಯ್ಯೋ ಪಾಪ! ನಮ್ಮ ಸಾಹುಕಾರರು ಬಲು ಉದಾರಿ! ಸುಮ್ಮನಿರಪ್ಪ ಸಾಕು. ಇಲ್ಲ-ಗತಿಯಿಲ್ಲವೆಂತ ಬ್ರಾಹ್ಮಣ ಏನನ್ನಾದರೂ ಕದ್ದು ಕೊಂಡು ಹೋಗಿರಬಹುದೇ?

೧ನೇ ಸೇ—ಆ ಬ್ರಾಹ್ಮಣ-ಕದಿಯೋದೇ? ಮುದುಕ-ಏನಯ್ಯಾ ಹೀಗೆ ಹೇಳ್ತೀ? ಛೀ! ಆ ಮಹಾನುಭಾವ ತಿರಕನಲ್ಲವಯ್ಯಾ. ಏನೋ ಅಪ್ಪ-ನನಗಂತೂ ಏನೂ ತೋರದು.

೨ನೇ ಸೇ—ಅದು ಸರಿ- ಈಗ ಆ ಬ್ರಾಹ್ಮಣನನ್ನು ಎಲ್ಲಪ್ಪಾ ಹುಡುಕೋಣ? ಬ್ರಾಹ್ಮಣ ಏನೋ ಮಾಯಾ ಮಾಡಿಬಿಟ್ಟನೆ!

೧ನೇ ಸೇ—ಅದೇನು ಮಾಯವೋ, ಮಂತ್ರವೋ- ಆ ಬೆಳಕು ನೆನಸಿಕೊಂಡರೆ....

೨ನೇ ಸೇ—ನಮ್ಮನ್ನು ಮರುಳು ಮಾಡಿ ಓಡಿಹೋಗುವುದಕ್ಕೆ ಆ ರೀತಿ ಮಾಡಿರಬಹುದಯ್ಯಾ.

೧ನೇ ಸೇ—ಮ-ರು-ಳೇ-? ನಾನು ಆ ಕಡೆಯೇ ಹೋಗಿ ಇನ್ನೊಂದು ಸಲ ನೋಡಿಕೊಂಡು ಬರುವೆನಯ್ಯಾ.

(ಹಿಂದಿನಕಡೆಯಿಂದ ಒಬ್ಬ ದಾಸಯ್ಯನು ಶಂಖವನ್ನು ಊದಿಕೊಂಡು ಬರುತ್ತಿರುವನು)

೨ನೇ ಸೇ—ಅಣ್ಣಾ, ಇಲ್ಲಿ ಯಾರೋ ಬರುತ್ತಾ ಇದ್ದಾರೆ- ಸ್ವಲ್ಪ ತಡೆ ಕೇಳೋಣ?

(ದಾಸಯ್ಯನ ಪ್ರವೇಶ)

ಏನಯ್ಯಾ - ನಿನ್ನದು ಯಾವ ವೂರು?
(೧ನೇ ಸೇವಕನು ದಾಸಯ್ಯನ ಕಡೆಯೇ ದಿಟ್ಟಿಸಿ ನೋಡುವನು)

ದಾ—ಎಲ್ಲಾ ವೂರೂ ನಮ್ಮೂರೇ!

೨ನೇ ಸೇ—ನೀನು ಇರುವುದೆಲ್ಲಯ್ಯಾ?

ದಾ— ನಾನು ಇಲ್ಲದೇ ಇರುವ ಜಾಗವೇ ಇಲ್ಲ!

೧ನೇ ಸೇ—ಹಾಗಾದರೆ, ನಮ್ಮ ಬ್ರಾಹ್ಮಣನನ್ನು ತೋರಿಸು.

ದಾ—ಯಾವ ಬ್ರಾಹ್ಮಣ?

೨ನೇ ಸೇ—ನಮ್ಮ ಸಾಹುಕಾರರ ಮನೆಯಿಂದ ಹೋದ ಬ್ರಾಹ್ಮಣ.

ದಾ—ಬನ್ನಿ ನನ್ನೊಡನೆ.

೧ನೇ ಸೇ--ನಮ್ಮ ಸಾಹುಕಾರರಿಗೂ ತೋರಿಸುತ್ತೀಯಾ?

ದಾ—ನಾನು ಬಂದಿರುವುದೇ ಅದಕ್ಕೋಸ್ಕರ.

೨ನೇ ಸೇ—ಅದು ಹೇಗಯ್ಯಾ ತೋರಿಸುತ್ತೀಯೆ?

ದಾ—ನನ್ನ ಶಂಖ ಊದಿ ಬಿಟ್ಟರೆ ಸರಿ - ಯಾರು ಎಲ್ಲಿದ್ದರೂ ನನ್ನ ಹತ್ತಿರ ಬಂದು ಬಿಡಬೇಕು.

೧ನೇ ಸೇ—ಹಾಗಾದರೆ, ಬ್ರಾಹ್ಮಣನು ಇರುವ ಕಡೆಗೆ ನಮ್ಮನ್ನು ಕರೆದೊಯ್ಯುವೆಯಾ?

ದಾ—ಬೇಡ. ನಾನೇ ಹೋಗಿ ಬ್ರಾಹ್ಮಣನನ್ನು ನಿಮ್ಮ ಸಾಹುಕಾರರ ಬಳಿಗೆ ಕರೆದುಕೊಂಡು ಹೋಗಿಬಿಡುವೆನು. ಆ ಮೇಲೆ ಬಂದು ನಿಮ್ಮನ್ನು ಕರೆದುಕೊಂಡು ಹೋಗುವೆನು.

(ಎಂದು ಹೊರಡುವನು. ಸೇವಕರು ಬಹಳ ದಿಟ್ಟಿಸಿ ನೋಡುತ್ತಿರುವರು)

೨ನೇ ಸೇ—ಏನಯ್ಯಾ, ನಮಗೆ ಮೋಸಮಾಡಿ ಹೊರಟುಹೋದನೇ? ಕರೆದುಕೊಂಡುಹೋಗಿ ಸಾಹುಕಾರರ ಹತ್ತಿರ ಬಿಡಬೇಕಾಗಿತ್ತು.

೧ನೇ ಸೇ—ನಿಜ. ದಾಸಯ್ಯ ವೋಸ ಮಾಡಿದ-(ಸ್ವಲ್ಪ ಚಿಂತಿಸಿ) ಇಲ್ಲವಯ್ಯಾ, ನೋಡಿದರೆ, ಬ್ರಾಹ್ಮಣನ ಮುಖ ಇದ್ದ ಹಾಗೆಯೇ ಇದೆ.

೨ನೇ ಸೇ—ಏನೋ ನನಗೂ ಈಗ ಹಾಗೆಯೇ ತೋರುತ್ತದೆ. ಧ್ವನಿಯೂ ಹಾಗೆ ಇತ್ತಯ್ಯಾ.

ಇಬ್ಬರೂ— ದಾಸಯ್ಯನನ್ನು ಹಿಡಿದು ಹಾಕಬೇಕಾಗಿತ್ತು ಅಯ್ಯೋ ಬಿಟ್ಟುಬಿಟ್ಟೆವೇ - ಈ ಕಡೆ ಹೋದ - ನೋಡೋಣ (ಎಂದು ಹೊರಡುವರು)



## — ಆ ರ ನೆ ಯ ನೋ ಟ —

(ಸಾಹುಕಾರನ ಮನೆಯ ಒಳಭಾಗದಲ್ಲಿ ನಾಯಕನ ಹೆಂಡತಿಯು ಇರುವಳು. ನಾಯಕನು ಸಂದೂಕವನ್ನು ಕೈಯಲ್ಲಿ ಹಿಡಿದು ಕೊಂಡು ಪ್ರವೇಶಿಸುವನು.)

ನಾಯಕ—ಮೂಗುತಿಯೆಲ್ಲಿ?

ಹೆಂಡತಿ—ಇಗೋ ಇಲ್ಲಿರುವುದು (ಎಂದು ಮೂಗುತಿಯನ್ನು ಕೊಡುವಳು. ನಾಯಕನು ಆಶ್ಚರ್ಯಪಡುತ್ತಾ ತನ್ನ ಬಳಿಯಲ್ಲಿದ್ದ ಸಂದೂಕವನ್ನು ತೆಗೆದು ಮೂಗುತಿಯನ್ನು ಕಾಣದೆ ಘಾಬರಿ ಯಿಂದ ನೋಡುವನು.)

ನಾಯ—ಇದೇನು, ಆಶ್ಚರ್ಯ! ಪೆಟ್ಟಿಗೆಯಲ್ಲಿ ಮೂಗುತಿಯೇ ಇಲ್ಲ. ಏನಾಯಿತು? ನಾನು ಅದನ್ನು ಪೆಟ್ಟಿಗೆಯೊಳಗಿಡಲಿ ಲ್ಲವೋ? ಹಾಗೆಂದರೇನು? ನನ್ನ ಕೈಯಿಂದಲೇ ಪೆಟ್ಟಿಗೆಯೊ ಳಗಿಟ್ಟೆನು. ಪೆಟ್ಟಿಗೆಯೊಳಗಿಂದ ಯಾರಾದರೂ ಕದ್ದರೋ! ಅದು ಹೇಗೆ ಸಾಧ್ಯವಾದೀತು? ಬೀಗವನ್ನು ಹಾಕಿ ಬೀಗದ ಕೈಯನ್ನು ನನ್ನ ಬಳಿಯೇ ಇಟ್ಟುಕೊಂಡಿದ್ದೆನು. ಮತ್ತೇ ನು ಮಾಯವಾಯಿತೋ? ಚೆನ್ನಾಗಿ ನೋಡೋಣ.

(ಎಂದು ಪುನಃ ಪೆಟ್ಟಿಗೆಯನ್ನು ತೆಗೆದುನೋಡುವನು)

ನಾಯ—ಇಲ್ಲ. ಸುಮ್ಮನೆ ಹುಡುಕಿ ಏನು ಪ್ರಯೋಜನ? ಅದ ರೊಳಗಿಲ್ಲದ್ದು ಹೇಗೆ ಬಂದೀತು? ಸರಿಯೇ- ಆದರೆ ಅದರೊ ಳಗಿದ್ದದ್ದು ಹೇಗೆ ಅದೃಶ್ಯವಾಯಿತು? ಏನೋ ಮಾಯವಾ ಗಿದೆ?

(ಎಂದು ಸ್ವಲ್ಪ ದಿಗ್ಭ್ರಮೆಯಾಗುವನು)

ಓಹೋ! ನಾನೇಕೆ ಇಷ್ಟು ಹುಡುಕುತ್ತಿದ್ದೇನೆ? ನನ್ನ ಕೈ ಯಲ್ಲಿಯೇ ಇದೆ. ಆದರೆ ಇದು ಎಲ್ಲಿತ್ತು? ನನ್ನ ಕೈಯಲ್ಲಿ ಹೇಗೆ ಬಂತು?

(ಎಂದು ತಿರುಗುವನು)

ಹೆಂ--ನಾನು ಈಗತಾನೇ ತಮ್ಮ ಕೈಗೆ ಕೊಟ್ಟೆನು.

ನಾಯ—ಹಾ! ನೀನು ಕೊಟ್ಟೆಯಾ? ನೀನೇಕೆ ಕೊಟ್ಟೆ?

ಹೆಂ—ತಂದುಕೊಡಬೇಕೆಂದು ಹೇಳಿದುದರಿಂದ ಕೊಟ್ಟೆನು.

ನಾಯ—ಅದು ಎಲ್ಲಿತ್ತು?

(ಹೆಂಡತಿಯು ಸುಮ್ಮನಿರುವಳು)

ನಾಯ—ಏನು ಹೇಳಿದೆ? ನಾನು ತೆಗೆದುಕೊಂಡು ಬಾರೆಂದೆನೆ?

ಹೆಂ—ಹೌದು. ಕೊಡದಿದ್ದರೆ, ನನ್ನನ್ನು ಕ್ರೂರವಾದ ಶಿಕ್ಷೆಗೆ ಗುರಿಮಾಡುವೆನೆಂದುದರಿಂದ ಮೂಗುತಿಯನ್ನು ತಂದುಕೊ ಟ್ಟೆನು.

ನಾಯ—(ಸ್ವಲ್ಪ ಸ್ಮರಿಸಿಕೊಂಡು) ನಿಜ. ಆದರೆ, ನಾನು ಕೇಳಿ ದಾಗ ಮೂಗುತಿಯು ಮುರಿದಿರುವುದೆಂದು ನೀನು ಹೇಳಿ ದಂತೆ ನನಗೆ ಜ್ಞಾಪಕವಿದೆ. ಅಲ್ಲವೆ?

ಹೆಂ—(ನಡುಗುತ್ತಾ) ನಿ-ಜ.

ನಾಯ—(ಪುನಃ ಮೂಗುತಿಯನ್ನು ನೋಡಿ) ಈ ಮೂಗುತಿಯು ಮುರಿದಿಲ್ಲ. ಸರಿಯಾಗಿದೆ. ಇದು ನಿನ್ನದೇ ಅಲ್ಲವೇ? (ಎಂದು ಪುನಃ ಮೂಗುತಿಯನ್ನು ನೋಡಿ) ಇದು ನಿನ್ನ ಮೂಗುತಿ ಎಂ

ಬುದರಲ್ಲಿ ಯಾವ ಅನುಮಾನವೂ ಇಲ್ಲ. ಆದರೆ ಮುರಿದಿದೆ ಎಂದು ಏತಕ್ಕೆ ಹೇಳಿದೆ?

ಹೆಂ--ನಿಮ್ಮ ಕೋಪಕ್ಕೆ ಭಯಪಟ್ಟು.

ನಾಯ—ಸರಿ, ನಿನ್ನನ್ನು ನೋಡಿದಾಗ ಮೂಗುತಿಯನ್ನು ಧರಿಸಿರಲಿಲ್ಲವಲ್ಲಾ. ಎಲ್ಲಿ ಒಳಗಿಟ್ಟಿದ್ದೆಯೋ?

ಹೆಂ—ಇಲ್ಲ.

ನಾಯ—ಮತ್ತೆ?

ಹೆಂ—ಬ್ರಾಹ್ಮಣನಿಗೆ ದಾನ ಕೊಟ್ಟಿದ್ದೆನು.

ನಾಯ—ಯಾವ ಬ್ರಾಹ್ಮಣ?

ಹೆಂ—ಒಬ್ಬ ವೃದ್ಧ ಬ್ರಾಹ್ಮಣನು ಮಗನ ಉಪನಯನಕ್ಕೆ ಸಹಾಯವನ್ನು ಯಾಚಿಸಲು ಬಂದಿದ್ದನು.

ನಾಯ—ಓಹೋ, ಅದೇ ಬ್ರಾಹ್ಮಣನೇ ನನಗೆ ಆ ಮೂಗುತಿಯನ್ನು ತಂದು ಕೊಟ್ಟು ಹೋದನು. ಸರಿ. ಅದನ್ನೇ ನಾನು ಪೆಟ್ಟಿಗೆಯೊಳಗಿಟ್ಟೆನು.

(ಎಂದು ಪುನಃ ಪೆಟ್ಟಿಗೆಯನ್ನು ತೆಗೆದುನೋಡುವನು)

ಪೆಟ್ಟಿಗೆಯಲ್ಲಿಲ್ಲಿ ಬಂತು? ಎಷ್ಟು ನೋಡಿದರೂ ಇಲ್ಲ. ಅಯ್ಯೋ ಹಾಳು ಪೆಟ್ಟಿಗೆಯೇ!

(ಎಂದು ಸಿಟ್ಟಿನಿಂದ ಪೆಟ್ಟಿಗೆಯನ್ನು ನೂಕುವನು)

ನಾನಿಟ್ಟಿದ್ದುದು ಏನಾಯಿತು? ಬ್ರಾಹ್ಮಣನೇನಾದರೂ ತೆಗೆದುಕೊಂಡು ಹೋಗಿ ಕೊಟ್ಟಿದ್ದಾನೆಯೋ! ಛೇ! ಏನು ಮಾತು! ಮೂಗುತಿಯನ್ನು ನನಗೆ ಕೊಟ್ಟುಹೋದ ಬ್ರಾಹ್ಮಣನು ಪುನಃ ಈ ಕಡೆ ಅಡ್ಡಾಡಲೇ ಇಲ್ಲ. ಮತ್ತೆ ಇಲ್ಲಿಂದ ಹೇಗೆ ಹೋಯಿತು?

(ಸ್ವಲ್ಪ ಹೊತ್ತು ಆಲೋಚಿಸುವನು)

ಇಲ್ಲ. ಇದರಲ್ಲಿ ಏನೋ ವಿಚಿತ್ರ ನಡೆದಿರಬೇಕು. (ಹೆಂಡ

ತಿಯಾಳದೆ ತಿರುಗಿ) ನಿಜವಾದ ಸಂಗತಿಯನ್ನು ಹೇಳು. ಇಲ್ಲ ವಾದರೆ ಸುಮ್ಮನೆ ಬಿಡುವುದಿಲ್ಲ. ಏನನ್ನೂ ಮರೆಮಾಚದೆ ತಿಳಿಸು. ವಿಷಯವನ್ನೆಲ್ಲಾ ಚೆನ್ನಾಗಿ ಹೇಳು. ನಡೆದ ಸಂಗ ತಿ ಏನು? ಎಲ್ಲಾ ಹೇಳು. ಬೇಗ ಹೇಳು.

ಹೆಂ—(ನಡುಗುತ್ತಾ) ನನ್ನ ಅಪರಾಧವನ್ನು ಕ್ಷಮಿಸಬೇಕು. ವೃದ್ಧ ಬ್ರಾಹ್ಮಣನು ಬಂದು ತನ್ನ ಮಗನಿಗೆ ಬ್ರಹ್ಮೋಪ ದೇಶವನ್ನು ಮಾಡಬೇಕೆಂದು ದ್ರವ್ಯ ಸಹಾಯವನ್ನು ಅಪೇ ಕ್ಷಿಸಿದನು. ಕೊಡಲು ನನಗೆಲ್ಲಿಯ ಸ್ವಾತಂತ್ರ್ಯ? ಆದರೆ, ಬ್ರಾಹ್ಮಣನ ದೈನ್ಯ ವೃತ್ತಿಯನ್ನೂ, ಹೀನ ಸ್ಥಿತಿಯನ್ನೂ ನೋಡಿ ಬರೀ ಕೈಯಲ್ಲಿ ಹಿಂದಕ್ಕೆ ಕಳುಹಿಸಲು ನನಗೆ ಮನ ಸ್ಸೊಡಂಬಡಲಿಲ್ಲ. ಆದಕಾರಣ, ನನ್ನ ತವರುಮನೆಯ ಮೂಗುತಿಯನ್ನು ದಾನವಾಗಿತ್ತೆನು.

ನಾಯ—ಆದರೆ, ಅದು ನಿನ್ನಲ್ಲಿಗೆ ಪುನಃ ಹೇಗೆ ಬಂತು? ನೀನು ಕೊಟ್ಟಾಗ ಬ್ರಾಹ್ಮಣನು ಮೂಗುತಿಯನ್ನು ತೆಗೆದುಕೊಂ ಡು ಹೋದನೇ?

ಹೆಂ—ತೆಗೆದುಕೊಂಡು ಹೋದನು.

ನಾಯ—ತೆಗೆದುಕೊಂಡು ಹೋದನೋ ಅಥವಾ ಅಲ್ಲಿಯೇ ಬಿಟ್ಟು ಹೋದನೋ ಚೆನ್ನಾಗಿ ಜ್ಞಾಪಿಸಿಕೊ.

ಹೆಂ—ನಿಜವಾಗಿಯೂ ತೆಗೆದುಕೊಂಡು ಹೋದನು. ತಾನು ಹೊದ್ದಿದ್ದ ಪಂಚೆಯ ಸೆರಗಿನಲ್ಲಿ ಅದನ್ನು ಕಟ್ಟಿಕೊಂಡು ದನ್ನು ನಾನು ಕಣ್ಣಾರ ಕಂಡೆನು.

ನಾಯ—ಸರಿ. ನೀನು ಹೇಳುವುದು ನಿಜ. ಬ್ರಾಹ್ಮಣನು ನನ್ನ ಬಳಿಗೆ ಬಂದು ತನ್ನ ಧೋತ್ರದ ಸೆರಗಿನಿಂದಲೇ ಬಿಚ್ಚಿ ಮೂಗುತಿಯನ್ನು ಕೊಟ್ಟನು. ಆದುದರಿಂದ ನಿನ್ನಲ್ಲಿ ಬಿಟ್ಟು ಹೋಗಲಿಲ್ಲವೆಂಬುದೇನೋ ನಿಜ. ಆದರೆ ಬ್ರಾಹ್ಮಣನು ಪುನಃ ಬಂದಿದ್ದನೋ?

ಹೆಂ—ಇಲ್ಲ.

ನಾಯ—ಹಾಗಾದರೆ, ಇದೇನು ವಿಚಿತ್ರ ? ಅದು ನಿನ್ನ ಹತ್ತಿರ ಪುನಃ ಹೇಗೆಬಂತು ? ಬೇಗ ಹೇಳು.

ಹೆಂ—ನಿಮ್ಮ ಸಿಟ್ಟಿಗೆ ಪಾತ್ರಳಾಗಿ ಅದು ಮುರಿದಿರುವುದೆಂದು ನಿಮ್ಮೆದುರಿಗೆ ಸುಳ್ಳು ಹೇಳಿದೆನು. ಕೊಡದಿದ್ದರೆ ನನ್ನನ್ನು ಬಹಳವಾಗಿ ಹಿಂಸಿಸುವೆನೆಂದಿರಿ. ಆಗ ಒಂದೂ ತೋರದೆ, ವಿಷವನ್ನು ಭುಂಜಿಸಬೇಕೆಂದು ಪರಮಾತ್ಮನನ್ನು ಧ್ಯಾನಿಸುತ್ತಾ ವಿಷದ ಬಟ್ಟಲನ್ನು ಬಾಯಿಯ ಬಳಿಗೆ ಎತ್ತಿದೆನು.

ನಾಯ—ಹಾ! ಅಯ್ಯೋ! ವಿಷವನ್ನು ತೆಗೆದುಕೊಂಡೆಯೊ?

ಹೆಂ—ಇಲ್ಲ. ಬಟ್ಟಲನ್ನು ತುಟಿಯ ಸಮೀಪಕ್ಕೆ ತರುವಷ್ಟರಲ್ಲಿಯೇ ಅದರೊಳಗೆ ಮೂಗುತಿಯು ಬಿತ್ತು. ದೇವರೇ ನನ್ನನ್ನು ಕಾಪಾಡಿದನೆಂದು ತಿಳಿದು ತಕ್ಷಣ ಅದನ್ನು ತೆಗೆದುಕೊಂಡು ಬಂದು ತಮ್ಮ ಕೈಗೆ ಕೊಟ್ಟೆನು. ಇದೇ ನಡೆದ ಸಮಾಚಾರ. ನನಗಿನ್ನೇನೂ ತಿಳಿಯದು.

ನಾಯ (ಆಶ್ಚರ್ಯಪಡುತ್ತಾ)—ಆ ಬ್ರಾಹ್ಮಣನು ನಿಜವಾಗಿಯೂ ತನ್ನ ಮಗನ ಬ್ರಹ್ಮೋಪದೇಶಕ್ಕಾಗಿ ಯಾಚಿಸಲು ಬಂದಿದ್ದನೇ? ನಾನು ಎರಡು ದುಗ್ಗಾಣಿಯನ್ನು ಕೊಟ್ಟೆ: ಇಲ್ಲಿಯೇ ಬಿಟ್ಟುಹೋದ-ಮೂಗುತಿಯನ್ನು ವಿಕ್ರಯಿಸಿ ಆದರ ಮೌಲ್ಯವನ್ನು ತಕ್ಷಣ ತೆಗೆದುಕೊಳ್ಳದೆ ಪುನಃ ಬರುವೆನೆಂದು ಹೇಳಿ ಹೊರಟುಹೋದ. ಆತುರವಿದ್ದರೆ ಸ್ವಲ್ಪ ಹಣವನ್ನು ತೆಗೆದುಕೊಳ್ಳೆಂದು ಕೊಡುವುದಕ್ಕೆ ಹೋದಾಗ ಬೇಡವೆಂದು ಹೇಳಿದ. ಪುನಃ ಬರಲೂ ಇಲ್ಲ. ಆತನು ಹೇಳಿದುದೆಲ್ಲಾ ಸುಳ್ಳು. ಮಗನೂ ಇಲ್ಲ. ಬ್ರಹ್ಮೋಪದೇಶವೂ ಇಲ್ಲ. ಆತನು ಬಂದಿದ್ದ ಉದ್ದೇಶವೇನಿರಬಹುದು? ಇದೇನು,-ಇಷ್ಟೆಲ್ಲಾ ವ್ಯಾಪಾರ? ಇನ್ನಾರಾದರೂ ಬ್ರಾಹ್ಮ

ಣನ ವೇಷವನ್ನು ಹಾಕಿಕೊಂಡು ಬಂದಿದ್ದರೋ? ಇದೇ
ನು ವಿಚಿತ್ರ! ನನ್ನ ಹೆಂಡತಿಯಲ್ಲಿಯೇ ಮೂಗುತಿಯನ್ನು
ಕೇಳಿ ನನ್ನಲ್ಲಿಯೇ ಅದನ್ನು ವಿಕ್ರಯಿಸುವುದು! ಮೂಗುತಿ
ಯು ಪೆಟ್ಟಿಗೆಯಲ್ಲಿಲ್ಲ. ವಿಷದ ಬಟ್ಟಲಿನಲ್ಲಿ ಅಕಸ್ಮಾತ್ತಾಗಿ
ಬಂದು ಬೀಳುವುದೆಂದರೇನು? ಇದೆಲ್ಲಾ ಬ್ರಾಹ್ಮಣನ ಕೆಲ
ಸವೇ!—ಹಾ, ಆತನು ತಿರುಪಗಾರನೂ ಅಲ್ಲ—ಮಾನವ
ಮಾತ್ರದವನೂ ಅಲ್ಲ. ಸೇವಕರು ಹಿಂಬಾಲಿಸಿದಾಗ ಅಂ
ತರ್ಧಾನವಾದವನು ಸಾಧಾರಣ ಮಾನವನೇ? ಆತನು ಪರ
ಮಾತ್ಮನಲ್ಲದೆ ಇನ್ನಾರು? ಸೇವಕರಿಗೆ ಕಂಡ ತಟಿತ್ಕೋಟಿ
ಪ್ರಭೆಯು ಪರಮಾತ್ಮನದೇ!

ಅಯ್ಯೋ, ನಾನೆಂತಹ ಪಾಪಿ! ಆತನು ಸಾಧಾರಣ ಮಾನ
ವನೇ? ಛೀ-ಛೀ-ಹಾಗೆ ತಿಳಿದುದರಿಂದಲೇ ನನಗೆ ಈ ಗತಿಯು
ಬಂತು. ಆತನು ನಿಜವಾಗಿಯೂ ಪರಮಾತ್ಮನು. ಪರಮಾ
ತ್ಮಾ! ಪರಮಾತ್ಮಾ!! ನಾನು ನಿನ್ನನ್ನು ತಿಳಿಯದೇ ಹೋದೆ
ನಲ್ಲಾ!

(ಎಂದು ತನ್ನ ಹೆಂಡತಿಯ ಕಡೆಗೆ ತಿರುಗಿ) ಹಾ, ಸಾಧ್ವೀ
ಮಣಿ! ನೀನೇ ಪುಣ್ಯವಂತಳು. ಆತನನ್ನು ನಾನು ಸಾಧಾರಣ
ತಿರುಕನೆಂದು ತಿಳಿದೆ. ನೀನು ಕೇವಲ ಮಹಾತ್ಮನೆಂದು ತಿಳಿ
ದೆ. ಲೋಭಿಯಾದ ನಾನು ಆತನಿಗೆ ಎರಡು ಕಿಲುಬು ನಾಣ್ಯ
ಗಳನ್ನೂ ಕೊಡದೆ ಆಚೆಗಟ್ಟಿದೆ. ನೀನು ಮೂಗುತಿಯನ್ನಿತ್ತು
ಆತನನ್ನು ಸತ್ಕರಿಸಿದೆ, ಆತನು ತಂದಿತ್ತ ಮೂಗುತಿಯನ್ನು ನಾ
ನು ಈ ಹಾಳು ಪೆಟ್ಟಿಗೆಯಲ್ಲಿಟ್ಟು ಭದ್ರವಾಗಿ ಬೀಗವನ್ನು
ಹಾಕಿದೆ. ನೀನಾದರೋ ಹೃದಯವೆಂಬ ಪೆಟ್ಟಿಗೆಯಲ್ಲಿಟ್ಟು
ಕೊಂಡೆ, ನಶ್ವರವಾದ ಮೂಗುತಿಯನ್ನು ಬಚ್ಚಿಡಲು ಹೋಗಿ
ಅದನ್ನು ನಾನು ಕಳೆದುಕೊಂಡೆ. ನೀನಾದರೋ ಪರಮಾತ್ಮ

ನಿಗೆ ಮೂಗುತಿಯನ್ನಿತ್ತು ಮುಕುತಿಯನ್ನು ಪಡೆದೆ. ಅನೇಕ ವೇಳೆ ನನ್ನ ಬಳಿಗೆಬಂದರೂ ನಾನು ಆತನನ್ನು ಲಕ್ಷಿಸದೇ ಹೋದೆ. ನೀನಿದ್ದೆಡೆಗೆ ಒಂದೇಸಲ ಒಂದಿದ್ದರೂ ನೀನು ಪರಮಾತ್ಮನ ಅನುಗ್ರಹವನ್ನು ಪಡೆದೆ. ಆಹಾ, ಭಕ್ತಶಿರೋಮಣಿಯಾದ ನೀನೆಲ್ಲಿ? ಪಾಮರನಾದ ನಾನೆಲ್ಲಿ? ನೀನೇ ನನಗೆ ಗುರು.

(ಎಂದು ಬೇರೆ ಕಡೆಗೆ ತಿರುಗಿ)

ಆಹಾ, ಇನ್ನು ಪರಮಾತ್ಮನನ್ನು ಕಾಣುವುದೆಂತು?

ಕಂದ || ಕಾಣುವೆನೆಂತಾ ಕರುಣೆಯ |
ಶ್ರೀನಿಧಿ ಪಾಪದೂರ ಪರಮಾತ್ಮನ ನೀಗಳ್ ||
ತಾನತಿ ದೈನ್ಯವ ನಟಿಸುತ |
ಮಾಸವನಂತೆ ತೋರಲವನನರಿಯದೆ ಜರಿದೆ ||

ಬ್ರಾಹ್ಮಣನು ಮೂಗುತಿಯನ್ನು ಕೊಟ್ಟಾಗ ಸರಿಯಾದ ಬೆಲೆಯನ್ನು ಕಂಡು ಹಿಡಿಯೆಂದನು. ಮುಕುತಿಯ ಬೆಲೆಯನ್ನು ಆಗಲೇ ಕಂಡು ಹಿಡಿಯದೆ, ಜೀವಮಾನವು ಶಾಶ್ವತವೆಂದು ನಂಬಿ ಅದನ್ನು ಈ ಪೆಟ್ಟಿಗೆಯಲ್ಲಿ ನಾನು ಬಚ್ಚಿಟ್ಟೆನು. ಅದು ಸಣ್ಣ ಪದಾರ್ಥವೆಂದು ತಿಳಿಯದಿರೆಂದು ಬ್ರಾಹ್ಮಣನು ಎಚ್ಚರಿಸಿದನು. ಮೂಗುತಿಯು,-ಮುಕುತಿಯು, ಬಹು ದುರ್ಲಭವಾದ ಮುಕ್ತಿಯು ಸುಲಭವೆಂದಿಗಾದೀತು?-ಅದನ್ನು ಕಳೆಯದಂತೆ ಕಾಪಾಡಬೇಕೆಂದು ಬ್ರಾಹ್ಮಣನು ಹೇಳಿದನು. ಅದರ ಗುಣವನ್ನೇ ತಿಳಿಯದ ನನಗೆ ಅದನ್ನು ಕಾಪಾಡುವ ಬಗೆಯು ಹೇಗೆ ತಿಳಿದೀತು? ಪುನಃ ಯಾವಾಗ ಬರುವಿರೆಂದುದಕ್ಕೆ ನಾನು ಅದರ ಸರಿಯಾದ ಬೆಲೆಯನ್ನು ತಿಳಿದೊಡನೆಯೇ ಬರುವೆನೆಂದು ಬ್ರಾಹ್ಮಣನು ಹೇಳಿದನು. ಹಾಗಾದರೆ ಬ್ರಾಹ್ಮಣನು ಬರುವನೇ? (ಎಂದು ಸ್ವಲ್ಪ ಸುಮ್ಮನಿರುವನು) ಬ್ರಾಹ್ಮಣರು

ಬರುತ್ತಿರುವರು. ಆಗೋ, ಕಾಣಿಸುತ್ತಿರುವುದು. ಬ್ರಾಹ್ಮಣಾಗೇ ಬನ್ನಿ-ದಯಮಾಡಿ (ಎಂದು ತೆರೆಯ ಕಡೆ ನೋಡಿ, ಬ್ರಾಹ್ಮಣನನ್ನು ಪಕ್ಕದಿಂದ ಕರೆದುಕೊಂಡು ಬರುವಂತೆ ನಟಿಸುವನು.)

—ವಿಪ್ರವರ್ಯರೇ, ಅಪರಾಧಿಯಾದ ನನ್ನನ್ನು ಕ್ಷಮಿಸಬೇಕು.

(ಎಂದು ತನ್ನ ಹೆಂಡತಿಯ ಕಾಲಿಗೆ ನಮಸ್ಕರಿಸುವಷ್ಟರಲ್ಲಿಯೇ ಆಕೆಯು ದಿಗ್ಭ್ರಮೆಯಿಂದ ಕಾಲುಗಳನ್ನು ಹಿಂದಕ್ಕೆಳೆದುಕೊಂಡು ತನ್ನ ಗಂಡನನ್ನು ಕೈ ಹಿಡಿದು ಮೇಲಕ್ಕೆತ್ತುವಳು.)

ಹೆಂಡತಿ--ಇದೇನು, ತಮ್ಮ ಪಾದಸೇವಕಳಾದ ಪತ್ನಿಗೆ ನಮಸ್ಕರಿಸುವುದೇ?

ನಾಯ---ಏನು? ನೀನು ನನ್ನ ಪತ್ನಿ. ಓಹೋ ಇಲ್ಲಿಗೆ ಬಂದಿದ್ದ ಬ್ರಾಹ್ಮಣರೆಲ್ಲಿ?

ಹೆಂ—ಬ್ರಾಹ್ಮಣರೆಲ್ಲಿ ಬಂದಿದ್ದರು? ಇಲ್ಲಿ ಯಾರೂ ಇಲ್ಲವಲ್ಲಾ.

(ನಾಯಕನು ಏನೂ ತೋಚದೆ ಸ್ವಲ್ಪ ಹೊತ್ತು ಸುಮ್ಮನೆ ಬಹಳ ದುಃಖದಿಂದ ನಿಲ್ಲುವನು)

ನಾ—ಅಯ್ಯೋ, ಮನಸ್ಸಿನ ಚಾಪಲ್ಯದಿಂದ ನೆನೆಸಿದರೆ ಬ್ರಾಹ್ಮಣರು ಬರುವರೇ! ಬಂದಾಗ ಅವರನ್ನು ಸತ್ಕರಿಸದ ನನಗಿನ್ನೇನು ಗತಿ? ಹಾ, ಪರಮಾತ್ಮಾ, ನನ್ನ ಕೈ ಬಿಡುವೆಯಾ? ಕೃಷ್ಣಾ, ಕೃಷ್ಣಾ, ಎಲ್ಲಿಗೆ ಹೊರಟುಹೋದೆ? ಯೋಗಿಜನಮಂದಾರಾ! ನಿನ್ನ ಚರಣಾರವಿಂದಗಳನ್ನು ನಾನು ಹೇಗೆ ಕಂಡೇನು? ಪ್ರಹ್ಲಾದ, ಧ್ರುವ ಇವರಂತೆ ನಿನ್ನಗುಟ್ಟನ್ನು ತಿಳಿಯದ ನಾನು ಜನರೆಲ್ಲರಿಂದ ಸನ್ಮಾನಿತನಾಗಿದ್ದರೇನು ಫಲ? ದಯಾಸಾಗರ! ಈ ಅಪಾರವಾದ ಭವಸಾಗರದ ಮಮತೆಯನ್ನು ನೀಗಿ ನಿನ್ನ ಅಡಿದಾವರೆಗಳನ್ನು 'ಹೇಗೆ ಸೇರುವೆನು? ನೀನು ಎಷ್ಟು

ದೂರ ಹೊರಟು ಹೋಗಿರುವೆಯೋ? ಅಯ್ಯೋ, ಇಲ್ಲಿ ಸುಮ್ಮನೆ ಕುಳಿತರೆ ನೀನು ಹೇಗೆ ಸಿಕ್ಕುವೆ? ಶಿಶುವಾದ ಧ್ರುವನು ಅಡವಿಯಲ್ಲಿ ಕಡು ಕಷ್ಟಗಳಿಗೀಡಾದರೂ ರಾಜ ಭೋಗಗಳನ್ನು ಬಿಟ್ಟು ನಿನ್ನನ್ನೇ ಎಡೆಬಿಡದೆ ಹುಡುಕಿಕೊಂಡು ಹೊರಟುದರಿಂದಲ್ಲವೇ ನೀನು ಅವನಿಗೆ ಪ್ರಸನ್ನನಾದುದು! ದಾರಿಯಲ್ಲಿ ದೊರೆತ ಗುರುಗಳ ಅನುಗ್ರಹವನ್ನು ಪಡೆದು ಅವರ ಉಪದೇಶವನ್ನು ಆಚರಣೆಗೆ ತಂದುದರಿಂದಲ್ಲವೇ ನೀನು ಆ ಕಂದನಿಗೆ ಎಂದೆಂದಿಗೂ ಕುಂದದ ಪದವಿಯನ್ನಿತ್ತೆ? ನಾನೂ ಹಾಗೆಯೇ ಮಾಡಲು ಈಗ ಹೊರಡುವೆನು.

ಪರಮಾತ್ಮನನ್ನು ನಾನು ಎಷ್ಟು ಬೇಕೋ ಅಲಕ್ಷ್ಯ ಮಾಡಿದರೂ, ಮತ್ತೆಮತ್ತೆ ಆತನು ನನ್ನ ಬಳಿಗೆ ಬರುತ್ತಿದ್ದನು. ಮೂಗುತಿಯನ್ನು ಇನ್ನಾರಿಗೂ ವಿಕ್ರಯಿಸುವುದಿಲ್ಲವೆಂದೂ ನನಗೇ ಕೊಡುವೆನೆಂದೂ ಹೇಳಿದನು. ಹಾ, ಕರುಣಾಕರ! ಪಾಮರನಾದ ನನ್ನ ಅಪರಾಧಗಳನ್ನು ಮನ್ನಿಸಿ ನನಗೆ ಅನುಗ್ರಹಮಾಡಬೇಕೆಂದು ನಿಂತಿರುವ ನಿನ್ನಂತಹ ಕೃಪಾಳುವಿನ್ನಾರುಂಟು? ನೀನು ಕೈ ಬಿಡುವುದಿಲ್ಲವೆಂಬ ಆಶೆಯು ನನ್ನ ಹೃದಯದಲ್ಲಿ ಅಂಕುರಿಸುತ್ತಿರುವುದು.

(ಒಬ್ಬ ಸೇವಕನು ಆತುರನಾಗಿ ಪ್ರವೇಶಿಸುವನು)

ಸೇವಕ—ಮಹಾಸ್ವಾಮಿ ...........

ನಾ—ಕೃಷ್ಣಾ, ನೀನೇನು ದಯಾಳುವೋ!

ಸೇ—ಮಹಾಸ್ವಾಮಿ, ಬಹುದೊಡ್ಡ... ....

ನಾ—ಪರಮಾತ್ಮ............

ಸೇ—ಬಹು ದೊಡ್ಡ ಗಿರಾಕಿಯು........

ನಾ—ನನ್ನನ್ನು ಉದ್ಧಾರ ಮಾಡನೇ?

ಸೇ—ತಮ್ಮನ್ನು ನೋಡಿ ತಮ್ಮೊಡನೆಯೇ ಮಾತನಾಡಲು ಬಹು ತವಕ ಪಡುತ್ತಿರುವರು.

ನಾ—(ಸೇವಕನ ಕಡೆಗೆ ತಿರುಗಿ) ಏನು? ನನ್ನೊಡನೆಯೇ ಮಾತನಾಡಬೇಕೆಂತಲೋ? ಎಲ್ಲಿರುವನು?

ಸೇ—ಅಂಗಡಿಯಲ್ಲಿಯೇ ಇರುವರು.

ನಾ—ಹಾಗಾದರೆ, ನಡೆ. ಈಗಲೇ ಹೊರಡೋಣ.

(ತೆರೆಯು ಬೀಳುವುದು)



## — ಏಳನೆಯ ನೋಟ —

(ಸಾಹುಕಾರನ ಅಂಗಡಿ–ಗುಮಾಸ್ತೆಯು ಲೆಕ್ಕ ಬರೆಯುತ್ತ ಕುಳಿತಿರುವನು. ಸೇವಕನೂ ನಾಯಕನೂ ಪ್ರವೇಶಿಸುವರು.)

ನಾಯಕ (ಸೇವಕನ ಕಡೆಗೆ)—ಎಲ್ಲಿ? ಬಂದಿದ್ದವರೆಲ್ಲಿ? ಬೇಗನೆ ತೋರಿಸು.

(ಸೇವಕನು ಗಾಬರಿಯಾಗಿ ಸುಮ್ಮನೆ ನಿಲ್ಲುವನು)

ನಾ—ನನ್ನೆದುರಿಗೆ ಸುಳ್ಳು ಹೇಳುವೆಯಾ?

(ಗುಮಾಸ್ತೆಯ ಕಡೆಗೆ ತಿರುಗಿ) ಇಲ್ಲಿಗೆ ಬಂದಿದ್ದವರೆಲ್ಲಿ?

ಗು—ಒಬ್ಬ ದೊಡ್ಡ ಗಿರಾಕಿಯು ಬಂದಿದ್ದರು........

ನಾ—ಗಿರಾಕಿ? ಹಾಳು ಗಿರಾಕಿ.

ಗು—ದೊಡ್ಡ ಗಿರಾಕಿಯೊಬ್ಬರು ವ್ಯಾಪಾರಕ್ಕಾಗಿ ಬಂದಿದ್ದರು.

ನಾ—(ಬಹು ಸಿಟ್ಟಿನಿಂದ)–ಗಿರಾಕಿ–ವ್ಯಾಪಾರ–ಸಾಕು. ಹಾಳು ವ್ಯಾಪಾರದಲ್ಲಿ ಮಗ್ನನಾಗಿ ಇದುವರೆವಿಗಾದುದೇ ಸಾಕು. ಇಲ್ಲಿಗೆ ಬಂದಿದ್ದ ಪರಮಾತ್ಮನೆಲ್ಲಿ?

ಗು—ಆ ಗಿರಾಕಿಯಲ್ಲದೆ, ಇನ್ನಾರೂ ಬಂದಿರಲಿಲ್ಲ.

ಸಾ—ಹಾಗಾದರೆ ಪರಮಾತ್ಮನು ಬಂದಿರಲಿಲ್ಲವೇ?

(ಗುಮಾಸ್ತೆಯು ಏನೂ ತೋರದೆ ಸುಮ್ಮನೆ ನಿಲ್ಲುವನು)

ನಾ—ಇದು ಏನೋ ಮತ್ತೊಂದು ವಿಚಿತ್ರ ಸಂಗತಿ! ಬಂದಿದ್ದ ಗಿರಾಕಿಯು ಎಲ್ಲಿ ಹೋದರು?

ಗು—ನೀವು ಬರುವುದಕ್ಕೆ ಸ್ವಲ್ಪ ಮುಂಚೆಯೇ ಹೊರಟುಹೋದರು.

ಸಾ—ಅಯ್ಯೋ, ಏಕೆ ಬಿಟ್ಟುಬಿಟ್ಟೆ?

ಗು—ಹೇಗಾದರೂ ನಿಮ್ಮನ್ನು ನೋಡೇ ನೋಡುವೆನೆಂದು ಹೇಳಿ ಹೊರಟುಹೋದರು.

(ನಾಯಕನು ಸ್ವಲ್ಪ ಚಿಂತಾಕ್ರಾಂತನಾಗಿ ನಿಲ್ಲುವನು)

ಗು—ಈ ಕಾಗದವನ್ನು ತಮ್ಮ ಕೈಗೆ ಕೊಡೆಂದು ಹೇಳಿ ಹೊರಟುಹೋದರು.

(ಎಂದು ಕಾಗದವನ್ನು ನಾಯಕನ ಕೈಗೆ ಕೊಡುವನು. ನಾಯಕನು ಸ್ವಲ್ಪಹೊತ್ತು ಮೇಲೆಮೇಲೆ ಕಾಗದವನ್ನು ಓದಿಕೊಳ್ಳುವನು)

ನಾಯಕ—ಚಂ॥ ವೃತ್ತ ॥

ಉದಯಿಸಿ ಭಾಸ್ಕರಂ ಜಗವನಾವರಿಸಿರ್ದ
ಮಹಾಂಧಕಾರಮಂ ।
ಚದರಿಸ ರೀತಿಯೊಳ್ ಶರಣರಕ್ಷಕ ನಿನ್ನ
ಕಟಾಕ್ಷ ಸೂರ್ಯತಾ ॥
ನುದಯಿಸುತೆನ್ನ ಚಿತ್ತದೊಳು ಕತ್ತಲೆಯಂ
ದದೊಳಿರ್ದ ಮೌಢ್ಯಮಂ ।
ಚದರಿಸಲಿಂದು ಧನ್ಯ ಬಹು ಧನ್ಯ ಧನ್ಯನು
ನಾನು ಪಿತ್ತಲಾ ॥

(ಹೆಂಡತಿಯು ಪ್ರವೇಶಿಸುವಳು)

ನಾಯಕ--ಸಾಧ್ವೀಮಣಿ, ಪರಮಾತ್ಮನು ನನಗೆ ಮೇಲೆಮೇಲೆ ಎಚ್ಚರಿಕೆಯನ್ನು ಕೊಡುತ್ತಿರುವನು. ಇನ್ನು ಸ್ವಲ್ಪವೂ ತಡಮಾಡಲಾಗದು.

ನಿನ್ನ ಒಡವೆ ವಸ್ತುಗಳನ್ನೆಲ್ಲಾ ತೆಗೆದಿಟ್ಟು ಸಾಧಾರಣ ವಸ್ತ್ರವನ್ನು ಧರಿಸಿ ಸಿದ್ಧಳಾಗು. ಈ ಮನೆ, ಈ ಐಶ್ವರ್ಯ, ಈ ವೈಭವ ಎಲ್ಲವೂ ಸಾಕು. ಈ ಅಸ್ಥಿರವಾದ ಭಾಗ್ಯವನ್ನೆಲ್ಲಾ 'ಕೃಷ್ಣಾರ್ಪಣ' ವೆಂದು ಧಾರೆಯೆರೆದು ಪರಮಾತ್ಮನ ನಾಮ ಕೀರ್ತನೆಯನ್ನು ಮಾಡುತ್ತಾ, ನಮ್ಮ ಜೀವಮಾನವನ್ನು ಕಳೆಯೋಣ.

**(ಬೇರೇ ಕಡೆಗೆ ತಿರುಗಿ ಕೈ ಜೋಡಿಸಿಕೊಂಡು)** ಪರಮಾತ್ಮಾ,

ಶ್ಲೋಕ || ಬದ್ಧೇನಾಂಜಲಿನಾ ನತೇನ ಶಿರಸಾ
ಗಾತ್ರೈಸ್ಸರೋಮೋದ್ಗಮೈಃ
ಕಂಠೇನ ಸ್ವರಗದ್ಗದೇನ ನಯನೇ
ನೋದ್ಗೀರ್ಣ ಬಾಷ್ಪಾಂಬುನಾ ||
ನಿತ್ಯಂ ತ್ವಚ್ಚರಣಾರವಿಂದ ಯು
ಗಳಧ್ಯಾನಾ ಮೃತಾಸ್ವಾದಿನಾಂ |
ಅಸ್ಮಾಕಂ ಸರಸೀರುಹಾಕ್ಷ ಸತತಂ
ಸಂಪದ್ಯತಾಂ ಜೀವಿತಂ||



# ದ್ವಿ ತೀ ಯಾ ೦ ಕ .

## — ಮೊ ದ ಲ ನೆ ಯ ನೋ ಟ —

(ಒಂದು ಬೀದಿ-ಇಬ್ಬರು ಪುರನಿವಾಸಿಗಳ ಪ್ರವೇಶ)

೧ನೇ ಪುರನಿವಾಸಿ—ಏನಯ್ಯಾ, ಈ ವಿಚಿತ್ರ ಸಂಗತಿ - ಕೇಳಿ ದೆಯೋ?

೨ನೇ ಪು. ನಿ.—ಏನು—ನಾಯಕರ ವಿಷಯ ತಾನೇ? ಅವರು ದೇಶಾಂತರ ಹೊರಟುಹೋದುದು?

೧ನೇ ಪು. ನಿ.—ಓಹೋ! ನಿನಗೂ ತಿಳಿದಿದೆ. ನಿನಗೆ ಯಾರು ಹೇಳಿದರು ?

೨ನೇ ಪು. ನಿ. (ನಗುತ್ತಾ) — 'ಊರಲ್ಲೆಲ್ಲರಿಗೂ ಗೊತ್ತಿದ್ದ ಮಾತು ಕಿವಿಯಲ್ಲಿ ಹೇಳು' ಎಂಬಂತೆ ನೀನೇನೋ ಇದು ಮಹಾ ಗುಟ್ಟೆಂದು ತಿಳಿದಿದ್ದೆ. ಈ ವಿಷಯ ಯಾರಿಗೆ ಗೊತ್ತಿಲ್ಲ.?

(ಮೂರನೆಯ ಪುರನಿವಾಸಿಯ ಪ್ರವೇಶ)

೩ನೇ ಪು. ನಿ.—ಏನ್ರೀ, ನಮ್ಮ ಸಾಹುಕಾರರ ವಿಷಯ ನಿಮ ಗೇನಾದರೂ ಗೊತ್ತೋ? ಎಲ್ಲಿಗೆ ಹೋದರಂತೆ? ಏನು ಸ ಮಾಚಾರ?

೨ನೇ ಪು. ನಿ. (೧ನೆ ಯವನ ಕಡೆಗೆ ತಿರುಗಿ).... ನೋಡಿದೇನ ಯ್ಯಾ? ನಾನು ಹೇಳಿದಮಾತು.... ಎಲ್ಲರೂ ಕಂಡಿದ್ದಾರೆ.

೩ನೇ ಪು. ನಿ.—ಎಲ್ಲಿಗೆ ಹೋದರಂತೆ?

೨ನೇ ಪು. ನಿ.—ಎಲ್ಲಿಗೆ ಹೋದರೋ.... ಮನೆ, ಮಠ ಎಲ್ಲಾ ದಾನಮಾಡಿ ದೇಶಾಂತರ ಹೊರಟುಹೋದರಂತೆ.

೧ನೇ ಪು. ನಿ.—ಅದೇನು? ಇಷ್ಟೆಲ್ಲಾ ದಾನಮಾಡುವ್ರದಕ್ಕೆ ಕಾರಣ?

೨ನೇ ಪು. ನಿ.—ದಾನಮಾಡುವ್ರದಕ್ಕೆ ಕಾರಣವೇನು ಬಂತು? ಏನೋ ಮನಸ್ಸು ಬಂತು-ದಾನಮಾಡಿದರು.

೧ನೇ ಪು. ನಿ.--ಮನಸ್ಸು ಬಂತು ಎಂದರೇನು? ಅತ....ಮ ಹಾರಾಯ, ಒಬ್ಬರಿಗೆ ಒಂದು ಕಾಸು ಕೊಟ್ಟವನಲ್ಲ. ಅಂ ತಹ ಲುಬ್ಧಾಗ್ರೇಸರ ಚಕ್ರವರ್ತಿಗೆ ಏಕಾಏಕಿ ಮನಸ್ಸು ಬ ರೋಣವೆಂದರೇನು?

೨ನೇ ಪು. ನಿ.—ಅಷ್ಟೇ ತಾನೇ? ಲೋಭಿಯು ದಾನಮಾಡಿ ದ್ದು ಇಷ್ಟು ಆಶ್ಚರ್ಯವೊ? ನಾನೂ ನೀನೂ ದಾನಮಾಡಿ ದರೆ ಕೇಳುವವರೇ ಇಲ್ಲ.

೧ನೇ ಪು. ನಿ. (ನಗುತ್ತಾ)--ನಾನೂ ನೀನೂ ದಾನಮಾಡುವ್ರ ದೋ?—ನಾವು ಬಹಳ ಶ್ರೀಮಂತರು! ದಾನಮಾಡುವ್ರ ದಕ್ಕೆ ನಮ್ಮಲ್ಲಿ ಏನಿದೆಯಯ್ಯಾ? ಚೆನ್ನಾಗಿ ಹೇಳಿದೆ....ನಾಯ ಕರು ದಾನಮಾಡುವ್ರದೂ ನಾವು ದಾನಮಾಡುವ್ರದೂ ಒಂ ದೇನೇ? ಅವರಿಗೆ ನಮ್ಮ ಹಾಗೆ ಮನೆ ಎಂದರೆ ಒಂದು ಚ ರಕು ಗುಡಿಸಲೇ?....ಒಡಕು ಜೋಕಿಗಳೇ? ಏನು ಐಶ್ವ ರ್ಯ! ಏನು ದಿವ್ಯಭವನ! ನಗನಾಣ್ಯ ನೋಡಿದರೋ-ಏನು ಅಗಾಧವಾದ ಸಂಪತ್ತು! ಏನು ವೈಭವ! ಇಷ್ಟೆಲ್ಲಾ ಬಿಟ್ಟು ಹೊರಟು ಹೋಗೋಣವೆಂದರೆ ಆಶ್ಚರ್ಯವಲ್ಲವೇ? ಇದ ಕ್ಕೇನೋ ಪ್ರಬಲವಾದ ಕಾರಣವಿರಬೇಕು.

೨ನೇ ಪು. ನಿ.—ಏನು ಕಾರಣವೋ ಅಪ್ಪ!

೩ನೇ ಪು. ನಿ.—ಏನ್ರೀ, ನಾನೇನೋ ಒಂದು ವಿಷಯ ಕೇಳಿದೆ.

೧ನೇ ಪು. ನಿ.—ಏನು ಹೇಳಿ?

೨ನೇ ಪು. ನಿ.--ಏನು ಹೇಳಿ?

೩ನೇ ಪು. ನಿ.—ಯಾರೋ ಒಬ್ಬ ವೃದ್ಧಬ್ರಾಹ್ಮಣ ಇವರ ಒಳಿಗೆ ಭಿಕ್ಷಕ್ಕೆ ಬಂದಿದ್ದನಂತೆ. ಆಗ ಏನೋ ಒಂದು ವಿಚಿತ್ರ ಸಂಗತಿಯು ನಡೆಯಿತಂತೆ. ಅದನ್ನು ನೋಡಿ ಇವರ ಮನಸ್ಸು ಬದಲಾಯಿಸಿ ಹೊರಟು ಹೋದರಂತೆ.

೧ನೇ ಪು. ನಿ.—ಬ್ರಾಹ್ಮಣ ಬಂದರೆ ಇವರ ಮನಸ್ಸೇಕೆ ಬದಲಾಯಿಸಬೇಕು?

೩ನೇ ಪು ನಿ.—ಪರಮಾತ್ಮನೇ ಬ್ರಾಹ್ಮಣನ ವೇಷವನ್ನು ಹಾಕಿಕೊಂಡು ಬಂದಿದ್ದನಂತೆ. ಆತನು ಮನುಷ್ಯನೆಂದು ಸಾಹುಕಾರರು ಅಲಕ್ಷ್ಯಮಾಡಿದರಂತೆ. ಪರಮಾತ್ಮನು ಮಾಯವಾದನಂತೆ. ಇದು ನಾನು ಕೇಳಿದ ಮಾತು.

೨ನೇ ಪು ನಿ.—ಏನು? ದೇವರು ಬ್ರಾಹ್ಮಣನ ವೇಷದಲ್ಲಿ ತಿರುಪ ಬೇಡುವುದಕ್ಕೆ ಬರುತ್ತಾನೆಯೋ?

೩ನೇ ಪು ನಿ —ವಾಮನಾವತಾರದ ಕಥೆಯನ್ನು ಕೇಳಿಲ್ಲವೇ?

೧ನೇ ಪು. ನಿ.—ಪರಮಾತ್ಮನು ಜನಗಳಿಗೆ ಆಗಾಗ ಎಚ್ಚರಿಕೆಯನ್ನು ಕೊಡುವುದಕ್ಕೆ ಯಾವಯಾವುದೋ ವೇಷವನ್ನು ಹಾಕಿಕೊಂಡು ಬರುತ್ತಾನೆಂದು ನಾನೂ ಅನೇಕ ಪುರಾಣಗಳಲ್ಲಿ ಕೇಳಿದ್ದೇನೆ.

೨ನೇ ಪು. ನಿ.—ಅದು ಸರಿ. ಈಗ ಆ ಸಾಹುಕಾರರು ಎಲ್ಲಿಗೆ ಹೋದರಂತೆ?

೧ನೇ ಪು. ನಿ.—ದೇವರನ್ನು ಹುಡುಕಿಕೊಂಡು ಹೊರಟಿದ್ದಾರಂತೆ.

೨ನೇ ಪು. ನಿ.—ದೇವರನ್ನು ಹುಡುಕುವುದೇ?

೩ನೇ ಪು. ನಿ.—ಅವರು ಎಲ್ಲಿ ಹೋದರೋ ಕಾಣೆ. ನಾನೂ ಅವರ ಹಿಂದೆಯೇ ಹೊರಡೋಣವೆಂದು ಮನಸ್ಸಿದೆ.

(ಗೋವಿಂದರಾಯನ ಪ್ರವೇಶ)

೨ನೇ ಪು. ನಿ.—ಏನು ನಾರದರೇ, ಸವಾರಿ ಎಲ್ಲಿ ಎಲ್ಲಿಗೆ ದಯ ಮಾಡಿಸಿತ್ತು?

೧ನೇ ಪು. ನಿ.—ಇದೇನ್ರಿ ಇವರು ನಮ್ಮ ಗೋವಿಂದರಾಯರ ಲ್ಲವೇ? ಇದೇನು ಹೊಸನಾಮಕರಣ?

೨ನೇ ಪು. ನಿ.---ಗೊತ್ತಿಲ್ಲವೇ ? ಗೋವಿಂದರಾಯರು ನಾರ ದರಂತೆ ತ್ರಿಲೋಕಸಂಚಾರಿ. ದೇಶವೆಲ್ಲಾ ಸುತ್ತುತ್ತಾ ಇರುತ್ತಾರೆ

ಗೋ—ಸಾಕು. ನಿಮ್ಮ ಅಪಹಾಸ್ಯ.

೨ನೇ ಪು. ನಿ.--ಅಪಹಾಸ್ಯವೇನು ? ನಿಮ್ಮನ್ನು ಈ ಊರಲ್ಲಿ ಎಷ್ಟೋ ದಿನದಿಂದ ಕಾಣಲೇ ಇಲ್ಲ. ಇದು ಸುಳ್ಳೇ ? ಅದು ಹೋಗಲಿ. ಈಗ ಎಲ್ಲೆಲ್ಲಿ ತಿರುಗಾಡಿಕೊಂಡು ಬಂ ದಿರಿ ? ಏನು ಸಮಾಚಾರ ?

ಗೋ--ಎಲ್ಲಿಯೂ ಹೋಗಿರಲಿಲ್ಲ. ಪಂಢರಾಪುರದಲ್ಲಿಯೇ ಇಷ್ಟು ದಿನವೂ ನಿಂತುಬಿಟ್ಟೆ.

೧ನೇ ಪು. ನಿ.--ಅದೇನು ? ಅಲ್ಲಿ ಅಷ್ಟು ದಿನ ?

ಗೋ--ನಮ್ಮ ನಾಯಕರು ಈಗ ಅಲ್ಲಿ ಇದ್ದಾರೆ.

೨ನೇ ಪು. ನಿ.—ಅದೇನು? ಅಲ್ಲಿ ಹೊಸದಾಗಿ ಅಂಗಡಿಯನ್ನು ತೆಗೆದಿದ್ದಾರೆಯೋ?

೧ನೇ ಪು. ನಿ.—ಎಲ್ಲಾ ಬಿಟ್ಟು ಹೊರಟು ಹೋದವರು ಪುನಃ ಅಂಗಡಿಯನ್ನು ತೆಗೆಯುವುದೇ? ಅದಿರಲಿ. ಗೋವಿಂದರಾ ಯರೇ, ನಾಯಕರ ಸಮಾಚಾರವೇನು? ಬೇಗ ಹೇಳಿ.

೨ನೇ ಪು. ನಿ.—ಅದೇನು ಸ್ವಾಮಿ? ಬೇಗ ಹೇಳಿ.

ಗೋ—ಆತುರಪಡಬೇಡಿ. ಹೇಳುತ್ತೇನೆ.

೨ನೇ ಪು. ನಿ.—ಹೇಳಿ, ಸ್ವಾಮಿ.

ಗೋ—ವಿಚಿತ್ರವಪ್ಪಾ, ಬಹು ವಿಚಿತ್ರ. ನಾಯಕರು ಈಗಿರು-
ವ ಸ್ಥಿತಿಗೂ ಅವರ ಹಿಂದಿನ ಸ್ಥಿತಿಗೂ ಸಂಬಂಧವೇ ಇಲ್ಲ.
ಹಿಂದೆ ಅವರಿಗಿದ್ದ ವೈಭವವೆಲ್ಲಿ? ಈಗಿನ ವಿರಕ್ತ ರೀತಿಯೆಲ್ಲಿ?

೧ನೇ ಪು.ನಿ.—ಅದೇನು, ಸ್ವಲ್ಪ ತಿಳಿಸಿ.

ಗೋ—ಹೆಂಡರು ಮಕ್ಕಳೊಡನೆ ಯಾವಾಗಲೂ ಪಂಢರಾಪು
ರದ ವಿಠಲನ ಧ್ಯಾನದಲ್ಲಿಯೇ ಕಾಲವನ್ನು ಕಳೆಯುತ್ತಿದ್ದಾ
ರೆ. ಇಹ ಲೋಕದ ಭೋಗಗಳ ಕಡೆಗೆ ಮನಸ್ಸೇ ಇಲ್ಲ.
ನನಗಂತೂ ಆಶ್ಚರ್ಯವಾಗಿ ಆ ಊರಿನಲ್ಲಿಯೇ ನಿಂತುಬಿಟ್ಟೆ-
ಜನಗಳೆಲ್ಲರೂ ಅವರನ್ನು ಹಿಂಬಾಲಿಸುತ್ತಿದ್ದಾರೆ. ಅವರ
ವ್ಯಕ್ತಿಯನ್ನು ನೋಡಿದರೆ, ಎಂತಹವನಿಗಾದರೂ ವಿರಕ್ತಿ
ಯು ಹುಟ್ಟುವುದರಲ್ಲಿ ಅನುಮಾನವೇ ಇಲ್ಲ.

೧ನೇ ಪು. ನಿ.—ಎಂತಹ ಮಹಾನುಭಾವರಪ್ಪಾ!

ಗೋ—'ವಿಠಲ' ನೇ ಅವರ ನವರತ್ನಗಳು. 'ವಿಠಲ' ನ ಗುಡಿ
ಯೇ ಅವರ ದಿವ್ಯ ಭವನ. 'ವಿಠಲ' ನ ಧ್ಯಾನವೇ ಅವರ
ವ್ಯಾಪಾರ. ಅವರ ಸ್ಥಿತಿ ಈ ರೀತಿ ಇದೆ.

೧ನೇ ಪು. ನಿ.—ಹಾಗಾದರೆ, ಆ ಮಹಾನುಭಾವರನ್ನು ನಾನೂ
ಈಗಲೇ ನೋಡಬೇಕು.

೩ನೇ ಪು. ನಿ.—ಎಲ್ಲರೂ ನಡೆಯಿರಿ. ಪಂಢರಾಪುರಕ್ಕೆ ಹೋ
ಗಿ ನೋಡಿಕೊಂಡು ಬರೋಣ.

೧ನೇ ಪು. ನಿ.—ಈಗಲೇ ನಡೆಯಿರಿ. ಹೊರಡೋಣ.

(ಎಂದು ಎಲ್ಲರೂ ಹೊರಡುವರು)



## ಎ ರ ಡ ನೆ ಯ ನೋ ಟ

(**ಪಂಡರಾಪುರದ ವಿಠಲನ ದೇವಸ್ಥಾನ—ಮುಂದುಗಡೆ ಕೆಲವರು ಕುಳಿತುಕೊಂಡು ಭಜನೆ ಮಾಡುತ್ತಿರುವರು.**)

ಭಜನೆ—

*ಪಂಢರಿನಾಥಾ | ಪಾವನ ಸುಚರಿತ | ಪಾಂಡವ ಪ್ರಿಯ ದೂತ | ಶರಣರ | ಕಾದುಕೊಂಡಿಹದಾತ | ಖ್ಯಾತ || ಪ ||

ಮಾತಾಪಿತನು | ಭ್ರಾತನು ಹಿತನು | ನಾಥನು ಜ್ಞಾತನು ಸಂತಾರಕನೂ || ಮತಿಯೂ ನೀನೇ | ಗತಿಯೂ ನೀನೇ | ಕಾತರವೇತರದೂ | ಬೀತುದೂ ||— ದೇವಾ || ೧ ||

ತನು ಮನ ಧನಗಳ | ನಿನಗರ್ಪಿಸಿದೆನು | ಎನಿತಾದರು ಇದು ಅನುಮಾನಿಸದೆ || ಜನರಾನಿಂದನೆ | ಮೋಹಾವಂದನೆ | ಮಾನಾ ಅವಮಾನಾ | ನಿನ್ನದೂ || ದೇವಾ || ೨ ||

ಚಿಂತೆಯ ಮರೆದೆ | ಭ್ರಾಂತಿಯು ತೊರೆದೆ | ಸಂತರ ಚರಣವನಾಂತೆ ದೃಢದೇ || ಸ್ವಾಂತವನೋದ | ವಾಂತುದು ಶ್ರೀದ | ಸಂತತ ಶ್ರೀಕಾಂತಾ | ನಿಶ್ಚಿಂತಾ || ದೇವಾ ||೩

(**ಇಷ್ಟರಲ್ಲಿಯೇ ಗೋವಿಂದರಾಯರೂ ಮತ್ತು ಪುರಂದರ ಗಡದ ಪುರನಿವಾಸಿಗಳೂ ಪ್ರವೇಶಿಸುವರು**)

ಗೋಪಿ—(**ಭಜನೆ ಮಾಡುತ್ತಿರುವವರ ಕಡೆಗೆ ತಿರುಗಿ**) ಸ್ವಾಮಿ! ನಮ್ಮ ನಾಯಕರೆಲ್ಲಿ?

ಭಜಕ—ಆ ಮಹಾನುಭಾವರು. ಈಗ ಈ ಊರಲ್ಲಿಲ್ಲ.

ಗೋ—ಇಲ್ಲಿಯೇ ಇದ್ದರಲ್ಲ. ಈಗ ಎಲ್ಲಿಗೆ ಹೋದರು? ಪುನಃ ಇಲ್ಲಿಗೆ ಯಾವಾಗ ಬರುವರು?

ಭ—ಇಲ್ಲಿಯೇ ಕೆಲವು ಕಾಲವಿದ್ದು ಹಂಪೆಗೆ ಪ್ರಯಾಣ ಮಾಡಿದರು.

ಗೋ—ನೋಡಬೇಕೆಂಬ ಆಸೆಯಿಂದ ಇವರೆಲ್ಲರೂ ಪುರಂದರ ಗಡದಿಂದ ಬಂದಿರುವರು.

೧ನೇ ಪ್ರ. ನಿ.—ಮಹಾನುಭಾವರ ದರ್ಶನವು ನಮಗೆ ಲಭಿಸು ವ ಸುಯೋಗವು ಎಂದಿಗೆ ದೊರಕುವುದೋ ಕಾಣೆ.

೨ನೇ ಪ್ರ. ನಿ.—ಅದು ಹಾಗಿರಲಿ. ನಮ್ಮ ನಾಯಕರು ಇಲ್ಲಿ ಏನು ಮಾಡಿಕೊಂಡಿದ್ದರು? ಸ್ವಲ್ಪ ತಿಳಿಸಿ.

ಭ—ಆಹಾ, ಆ ವಿಚಾರ ಬಹು ವಿಚಿತ್ರವಾಗಿದೆ. ಅವರು ಕೇವಲ ವಿರಕ್ತ ಸ್ಥಿತಿಯಲ್ಲಿ ನಿರಂತರವೂ ವಿಠಲನ ಧ್ಯಾನದಲ್ಲಿಯೇ ಮಗ್ನರಾಗಿರುತ್ತಿದ್ದರು. ಹಗಲೂ ರಾತ್ರಿಯೂ ವಿಠಲನ ಭಜನೆಯೇ—ಈತನಾರೋ ಒಬ್ಬ ಹುಚ್ಚನೆಂದು ನಮ್ಮಲ್ಲಿ ಕೆಲವರು ಮೊದಲು ಹಾಸ್ಯಮಾಡ ತೊಡಗಿದರು. ಆದರೆ. ಅವರ ದೈವಭಕ್ತಿಯು ಮತ್ತಷ್ಟು ಸ್ಥಿರವಾಯಿತು.

೧ನೇ ಪ್ರ. ನಿ.—ಎಂತಹ ಮಹಾನುಭಾವರಪ್ಪ!

ಭ—ಈ ಮಹಾಪುರುಷರು ನಮ್ಮ ಗ್ರಾಮದಲ್ಲಿ ಕಾಲಿಟ್ಟ ದೇ—ನಮ್ಮೆಲ್ಲರ ಆಚರಣೆಯೇ ಬದಲಾಯಿಸಿತು. ಎಲ್ಲರಿಗೂ ಮೇಲುಪಙ್ಕ್ತಿಯಾಗಿ ವಿಠಲನ ಭಜನೆಯಲ್ಲಿ ಯಾವಾಗ ಅವರು ಮಗ್ನರಾದರೋ! ಆಮೊದಲು ಅವರನ್ನು ಹುಚ್ಚರೆಂದು ಭಾವಿಸಿದ್ದ ನಮಗೂ ಅದೇ ಹುಚ್ಚು ಹಿಡಿಯಿತು. ನಾವೂ ಅವರನ್ನೇ ಅನುಸರಿಸಿದೆವು. ವಿಠಲನನ್ನು ಭಜಿಸತೊಡಗಿದೆವು. ಮನಸ್ಸಿನ ಕಲ್ಮಷವನ್ನು ತೊಳೆಯುವ ದಾರಿಯನ್ನು ತಿಳಿದೆವು. ತಾವೇ ಮಾದರಿಯಾಗಿ ನಿಂತು ಅವರು ನಮ್ಮನ್ನು ಉದ್ಧಾರ ಮಾಡಿದರು.

ಗೋ—ಇಂತಹ ಆದರ್ಶಕರಿರುವಾಗ ಈ ರೀತಿ ಪರಿಣಮಿಸಿದುವುದೇನಾಶ್ಚರ್ಯ?

೧ನೇ ಪ್ರ. ನಿ.—ನಿಮ್ಮಂತೆ ವಿಠಲನ ಹುಚ್ಚು ಹಿಡಿದವರೇನು ಧನ್ಯರೋ!

ಭ—ಮಹನೀಯರುಗಳಿರಾ, ಇಲ್ಲಿ ಬನ್ನಿ—ನಮ್ಮೊಡನೆ ಸೇರಿ. ಎಲ್ಲರೂ ವಿಠಲನ ಭಜನೆಯನ್ನು ಮಾಡೋಣ.

*ಜಯ್ ಜಯ್ ವಿಠಲ |
ವಿಠಲ ಜಯ್ ಜಯ್ ||
ಜಯ್ ಜಯ್ ವಿಠಲ |
ವಿಠಲ ಜಯ್ ಜಯ್ || - ||
ವಿಠಲ ವಿಠಲ ಗೋವಿಂದ |
ವಿಠಲ ವಿಠಲ ಮುಕುಂದ |
ಜಯ ವಿಠಲ—ನಮೋ ವಿಠಲ
ಶಿಷ್ಟೇಷ್ಟ—ದುಷ್ಟಾನಿಷ್ಟ--ಶ್ರೀಕಾಂತ —ವಿಠಲ || ೧ ||

(ಫರದೆಯು ಬೀಳುವುದು)



## ಮೂರನೆಯ ನೋಟ

(ಒಂದು ಬೀದಿ—ತ್ರಿವಿಕ್ರಮ ಪಂಡಿತರು ಆತುರರಾಗಿ ಪ್ರವೇಶಿಸುವರು ಎದುರಿನಿಂದ ರಾಮಾಚಾರ್ಯರ ಪ್ರವೇಶ)

ರಾ—ಏನು, ತ್ರಿವಿಕ್ರಮ ಪಂಡಿತರೇ, ದೊಡ್ಡ ಶಾಲು? ಇಷ್ಟು ಆತುರ?

ತ್ರಿ—ಆತುರ ಎಂತ ಕೇಳುವಿರಿ. ಅರಮನೆಗೆ ರಾಜನ ಆಸ್ಥಾನಕ್ಕೆ ಹೋಗಬೇಕು - ನನಗೆ ಆಮಂತ್ರಣ ಬಂದಿದೆ. ನಾನು ಹೊರಟೆ!

(ಎಂದು ಮುಂದೆ ಹೊರಡುವರು)

ರಾ (ಪುನಃ ತಡೆದು)—ಸ್ವಾಮಿ, ಸ್ವಲ್ಪ ನಿಲ್ಲಿ.

ತ್ರಿ—ಅಯ್ಯೋ, ತಡೆಯಬೇಡಿ-ಸಾವಕಾಶವಾದೀತು. ಮಹಾರಾಜರು ಏನಾದರೂ ತಿಳಿದುಕೊಂಡಾರು. ನಾನು ಹೊರಡಲೇ ಬೇಕು.

ರಾ (ಆತ್ಮಗತ)-ಪಾಪ, ಇವರು ಹೋಗದಿದ್ದರೆ ರಾಜನ ಆಸ್ಥಾನದಲ್ಲಿ ಈ ದಿನದ ಸಭೆಯೇ ನಡೆಯುವುದಿಲ್ಲ! (**ಪಂಡಿತರ ಕಡೆಗೆ**) ಅದಿರಲಿ, ಸ್ವಾಮಿ, ಸ್ವಲ್ಪ ಕೇಳಿ-ಒಂದು ವಿಷಯಕ್ಕೆ ಆತುರಪಡುತ್ತೀರಿ?

ತ್ರಿ—ಅದೇನು? ಬೇಗ ಬರಬಾರದೇ? ಇಲ್ಲಿ ಹೊತ್ತು ಮಾಡಿಕೊಂಡು ಅಲ್ಲಿ ಮರ್ಯಾದೆ ಕಳೆದುಕೊಳ್ಳಬೇಕಾಗುತ್ತದೆ.

ರಾ—ಸಾಕು ತಮ್ಮ ಮರ್ಯಾದೆಗಿಷ್ಟು! ನಮ್ಮನ್ನೆಲ್ಲಾ ಈಗ ಕೇಳುವವರಾರು?

(ವಿರೂಪಾಕ್ಷಶಾಸ್ತ್ರಿಗಳು ಕೊರಳೊಳಗೆ ರುದ್ರಾಕ್ಷಿಮಾಲೆಯನ್ನು ಹಾಕಿಕೊಂಡು ಜಪಮಣಿಯನ್ನು ಎಣಿಸುತ್ತಾ ಪ್ರವೇಶಿಸುವರು)

ವಿರೂ—ಏನು ಪಂಡಿತರೇ, ಹೊತ್ತಾಗಲಿಲ್ಲವೇ, ಆಸ್ಥಾನಕ್ಕೆ?

ರಾ—ಆಸ್ಥಾನವಿರಲಿ. ನಿಮ್ಮ ಸ್ಥಾನಗಳೇ ಭದ್ರವಿಲ್ಲ. ಏಕೆ ಸುಮ್ಮನೆ ಪ್ರತಾಪ?

ತ್ರಿ—ಅದೇನು ಸಮಸ್ಯೆ? ಬೇಗ ಬಿಡಿಸಿ ಹೇಳಬಾರದೇ?

ವಿರೂ—ಏನು ಅಂತಹ ಪ್ರಮಾದ? ಬೇಗ ಹೇಳಿ ರಾಮಾಚಾರ್ಯರೇ.

ರಾ-ಏನೂ ಇಲ್ಲ. ನಮ್ಮ ನಿಮ್ಮ ಪಾಂಡಿತ್ಯಗಳನ್ನು ಕೇಳುವವರಾರು? ಕಾಲ ಕೆಟ್ಟುಹೋಯಿತು. ಏನೂ ಯೋಗ್ಯತೆಯಿಲ್ಲದವರಿಗೆ ಮರ್ಯಾದೆ-ಷಟ್ಛಾಸ್ತ್ರಗಳಲ್ಲಿಯೂ ನಿಪುಣರಾದ ತ್ರಿವಿಕ್ರಮ ಪಂಡಿತರಿಗಿಂತ ಹೆಚ್ಚಿನ ಮರ್ಯಾದೆಗೆ ಅರ್ಹರಿನ್ನಾರು?

ತ್ರಿ-ಉಪಚಾರದ ಮಾತೇಕೆ? ವಿರೂಪಾಕ್ಷಶಾಸ್ತ್ರಿಗಳಿಗಿಂತ ಸಂಸ್ಕೃತದಲ್ಲಿ ದಿಗ್ದಂತಿಗಳೂ ಜಪತಪಗಳಲ್ಲಿ ನಿರತರೂ ಇನ್ನಾರಿದ್ದಾರೆ?

ವಿರೂ-ಸುಮ್ಮನೆ ಹೇಳುವುದೇನು? ಪುರಾಣದಲ್ಲಿ ರಾಮಾಚಾ

ರ್ಯರೊಡನೆ ತುಲನೆ ಮಾಡಿದರೆ ಯಾರು ತಾನೇ ಸದೃಶ ರಾಗಿ ನಿಂತಾರು ? ಹೀಗಿರುವಲ್ಲಿ ಇನ್ನಾರಿಗಪ್ಪ ಹೆಚ್ಚು ಮರ್ಯಾದೆ ?

ರಾ-ಯಾರಿಗೂ ಇಲ್ಲ ಸ್ವಾಮೀ-ನನಗೇಕೆ ?

ತ್ರಿ-ಅಯ್ಯೋ ರಾಮಣ್ಣಾ, ಹೇಳಬಾರದೇ ?

ರಾ-ಆ ಪುರಂದರ ದಾಸ ಇದ್ದಾನಲ್ಲ-ರಾಜಾಸ್ಥಾನದಲ್ಲಿ ಎಲ್ಲರಿಗಿಂತಲೂ ಅವನಿಗೇ ಹೆಚ್ಚು ಗೌರವ. ನಮ್ಮ ಗುರುಗಳು ವ್ಯಾಸರಾಯರೂ ನಮ್ಮೆಲ್ಲರಿಗಿಂತಲೂ ಆ ದಾಸನಿಗೇ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ನಾವು ಹೇಗೆ ತಾನೇ ಸಹಿಸಿಕೊಂಡಿರೋಣ ? ಹೇಳಿ.

ವಿರೂ (ತೆರೆಯ ಕಡೆ ನೋಡುತ್ತಾ)-ಇಗೋ, ಆ ಪ್ರಸ್ತಾಪವನ್ನು ಎತ್ತುವ ಹೊತ್ತಿಗೆ ಸರಿಯಾಗಿ ಸವಾರಿ ದಯಮಾಡಿಸುತ್ತಾ ಇದೆ. ಸ್ವಲ್ಪ ಸುಮ್ಮನಿರಿ.

(ಎಲ್ಲರೂ ಒಂದು ಕಡೆ ನಿಲ್ಲುವರು. ಪುರಂದರದಾಸರು ಪ್ರವೇಶಿಸುವರು)

ಪುರಂದರ—

ವ್ಯಾಸರಾಯರ ಚರಣಕಮಲ ದರುಶನವೆನಗೆ |
ಹಸು ಜನ್ಮದ ಸುಕೃತಫಲ ದೊರಕಿತೊ ಎನ್ನ ||
ಸಾಸಿರ ಕುಲಕೋಟಿ ಪಾವನ್ನವಾಯಿತು |
ಶ್ರೀಶನ್ನ ಭಜಿಸುವುದಕಧಿಕಾರಿ ನಾನಾದೆ ||
ದೋಷರಹಿತನಾದ ಪುರಂದರ ವಿಠಲನ |
ದಾಸರ ಕರುಣವೆನ್ನಮೇಲೆ ಇರಲಾಗಿ ||

(ವಿರೂಪಾಕ್ಷ ಶಾಸ್ತ್ರಿಗಳೂ, ರಾಮಾಚಾರ್ಯರೂ ತ್ರಿವಿಕ್ರಮ ಪಂಡಿತರೂ ಮುಂದಕ್ಕೆ ಬಂದು ಪುರಂದರದಾಸರಿಗೆ "ನಮೋ ನಮೋ" ಎಂದು ನಮಸ್ಕರಿಸುವರು)

ಪುರಂ-ನಮಸ್ಕಾರ.

ರಾಮಾ-ಆಗಮನಕ್ಕಾಗಿ ಆನಂದ.

ವಿರೂ-ಮಹಾನುಭಾವರ ಮಹಿಮೆಯು ಮಹಿಯಲ್ಲಿ ಮೇರೆಗಾಣದು.

ತ್ರಿ-ದರ್ಶನವೇ ದುರ್ಲಭ.

ಪುರಂ-ಇದೇನು ? ಪಾಮರನಾದ ನನ್ನನ್ನು ಇಷ್ಟು ಹೊಳುವಿರಿ ? ಇದಕ್ಕೆ ನಾನು ಅರ್ಹನಲ್ಲ. ನನ್ನಲ್ಲಿ ಅಲ್ಪಸ್ವಲ್ಪ ಜ್ಞಾನವು ಅಂಕುರಿಸಿದ್ದರೂ ಅದೆಲ್ಲವೂ ನಮ್ಮ ಗುರುಗಳ ಅನುಗ್ರಹಬಲದಿಂದ.

ಶಾ-ತಮಗೆ ಗುರುಗಳೆಂದರೇನು ? ಜ್ಞಾನದಲ್ಲಿ ತಮಗೆ ಅಧಿಕರಾದವರಾರು ?

ಪುರಂ-ಇದೀಗ ಚೆನ್ನಾಯಿತು-

ಗುರು ಉಪದೇಶವಿಲ್ಲದ ಜ್ಞಾನ |
ಗುರು ಉಪದೇಶವಿಲ್ಲದ ಯೋಗ |
ಗುರು ಉಪದೇಶವಿಲ್ಲದ ಕ್ರಿಯೆಗಳು |
ಉರಗನ ಉಪವಾಸದಂತೆ ಕಾಣಿರೊ |
ಗುರು ವ್ಯಾಸರಾಯರೇ ಕರುಣದಿಂದೆನಗೆ |
ವರಮಹಾಮಂತ್ರಂಗಳ ಉಪದೇಶಿಸಿದರು |
ಪುರಂದರ ವಿಠಲನೆ ಪರನೆಂದರುಹಿ |
ದುರಿತಭಯವನೆಲ್ಲ ಪರಿಹರಿಸಿದರಾಗಿ ||

(ಮೂರು ಜನವೂ ಒಬ್ಬರಮುಖವನ್ನೊಬ್ಬರು ನೋಡುವರು)

ತ್ರಿ-ಈ ಮಾತು ತಮಗೆ ಹೇಳಿದುದಲ್ಲ. ನಮ್ಮಂತಹವರಿಗೆ ಮಾತ್ರ-

ಪುರಂ-ಹಾಗಲ್ಲ-ಮುಕುತಿಯನ್ನು ಪಡೆಯಲು ಗುರುಗಳ ಅನುಗ್ರಹವು ಎಲ್ಲರಿಗೂ ಅತ್ಯವಶ್ಯಕ. ಕೇಳಿ-

ರಾಗ-ನಾದನಾಮಕ್ರಿಯೆ-ಅಟತಾಳ

ಗುರುವಿನ ಗುಲಾಮನಾಗುವತನಕ ದೊರೆಯದಣ್ಣ
ಮುಕುತಿ ||ಪ||

ತಾ—ಮಕ್ಕಳಿರಾ, ಅವರು ಎಷ್ಟು ಹೊತ್ತಿಗೆ ಬರುವರೋ. ಹೇಗೆ ಹೇಳಲಿ?

ಮ—ಅಮ್ಮಾ, ಅಪ್ಪ ಎಲ್ಲಿಗೆ ಹೋಗಿದ್ದಾನಮ್ಮಾ?

ತಾ—ವಿಠಲನ ಹತ್ತಿರವೇ ಮೂರು ಹೊತ್ತೂ ಕುಳಿತಿರುತ್ತಾರೆ, ಕಂದಗಳಿರಾ!

ಮ-ಅಮ್ಮಾ, ನಮಗೆ ಬಹಳ ಹಸಿವಾಗುತ್ತದೆ. ಏನಾದರೂ ತಿಂಡಿ ಕೊಡಮ್ಮ.

ತಾ-ಮಕ್ಕಳಿರಾ, ನನಗೆ ಬಹಳ ಸಂಕಟವಾಗುತ್ತೆ. ಏನು ಮಾಡಲಿ?

ಮ-ಅಮ್ಮಾ, ಅಪ್ಪನಿಗೆ ಹಸಿವಾದರೇನು ಮಾಡುತ್ತಾನಮ್ಮಾ?

ತಾ-ಅವರಿಗೆ ವಿಠಲನೆದುರಿಗಿದ್ದರೆ ಹಸಿವೂ ಇಲ್ಲ ಬಾಯಾರಿಕೆಯೂ ಇಲ್ಲ.

ಮ-ವಿಠಲನೇ ತಿಂಡಿ ಕೊಡಬಹುದಮ್ಮಾ. ಅಮ್ಮಾ, ನಾವೂ ಹೋಗಿ ವಿಠಲನನ್ನು ತಿಂಡಿ ಕೊಡೆಂದು ಕೇಳಿದರೆ ಕೊಡುತ್ತಾನೆ.

**(ತಾಯಿಯು ಬಹಳ ದುಃಖಪಡುತ್ತಿರುವಳು, ಒಬ್ಬ ಮನುಷ್ಯನು ಪ್ರವೇಶಿಸುವನು.)**

ಆಗಂತುಕ-ಅಮ್ಮಾ, ದಾಸರೆಲ್ಲಿ, ದಾಸರು?

ತಾಯಿ-ಎಲ್ಲಿಗೋ ಹೋದರು-ಮನೆಯಲ್ಲಿಲ್ಲ.

ಆಗಂತುಕ (**ಪುನಃ ಆತುರದಿಂದ**) - ದಾಸರು ಎಲ್ಲಿ ಹೋದರು, ದಾಸರು?

**(ಹೆಂಗಸಿನ ಕೈಗೆ ಸೂಜಿಯು ಚುಚ್ಚಿಕೊಳ್ಳುವುದು)**

ತಾಯಿ-(ಸಿಟ್ಟಿನಿಂದ) - ಎಲ್ಲಿಗೆ ಹೋದರೋ. ಹೋಗುವುದಿನ್ನೆಲ್ಲಿಗೆ? ವಿಠಲನ ಬಳಿಗೆ ಹೋಗಿದ್ದಾರೆ.

ಆಗಂ-ಪೇಚಾಡಬೇಡಿ, ಅಮ್ಮಾ. ಹಾಗಾದರೆ, ನಾನೇ ಹೋಗಿ ಅವರನ್ನು ನೋಡಿಕೊಂಡು ಬರುವೆನು.

**(ಎಂದು ಹೊರಟು ಹೋಗುವನು)**

## ಬದಲಾವಣೆಯ ನೋಟ

(ಗುಡಿಸಲು ಉಪ್ಪರಿಗೆಯ ಮನೆಯಾಗಿ ಪರಿಣಮಿಸುವುದು. ಇದಕ್ಕೆ ಎದುರು ಪಕ್ಕದಿಂದ ಪುರಂದರದಾಸರು ಪ್ರವೇಶಿಸುವರು)

ಪುರಂ—ರಾಗ - ಮಧ್ಯಮಾವತಿ - ಆದಿತಾಳ

ಆದದ್ದೆಲ್ಲ ಒಳಿತೆ ಆಯಿತು, ನಮ್ಮ || ಪ ||
ಶ್ರೀಧರನ್ನ ಸೇವೆ ಮಾಡಲು
ಸಾಧನ ಸಂಪತ್ತಾಯಿತು || ಅನು ||
ದಂಡಿಗೆ ಬೆತ್ತ ಹಿಡಿಯುವುದಕ್ಕೆ |
ಮಂಡೆಬಾಗಿ ನಾಚುತಲಿದ್ದೆ |
ಹೆಂಡತಿ ಸಂತತಿ ಸಾವಿರವಾಗಲಿ |
ದಂಡಿಗೆ ಬೆತ್ತ ಹಿಡಿಸಿದಳಯ್ಯ || ೧ ||
ಗೋಪಾಳ ಬುಟ್ಟಿ ಹಿಡಿಯುವುದಕ್ಕೆ |
ಭೂಪತಿಯೆಂದು ಗರ್ವಿಸುತಿದ್ದೆ |
ಆಪತ್ನೀಕುಲ ಸಾವಿರವಾಗಲಿ |
ಗೋಪಾಲಬುಟ್ಟಿ ಹಿಡಿಸಿದಳಯ್ಯ || ೨ ||
ತುಳಸೀಮಾಲೆ ಹಾಕುವುದಕ್ಕೆ |
ಅರಸನಾಗಿ ತಿರುಗುತಲಿದ್ದೆ |
ಸರಸಿಜಾಕ್ಷ ನಮ್ಮ ಪುರಂದರ ವಿಠಲನು |
ತುಳಸೀಮಾಲೆ ಹಾಕಿಸಿದನು || ೩ ||

(ಆಕಾಶದ ಕಡೆಗೆ ನೋಡಿ)

ಆಗಲೇ ಮಧ್ಯಾಹ್ನವಾಗುತ್ತಾ ಬಂತು. ಗುಡಿಸಲಸ್ಲಿ ಮಕ್ಕಳು ಹಸಿವಿನಿಂದ ಎಷ್ಟು ಸಂಕಟಪಡುತ್ತಿವೆಯೋ. ಪಾಪ! ನಾನು ಹೆಂಡಿರುಮಕ್ಕಳನ್ನು ಕಟ್ಟಿಕೊಂಡು ಬಂದು ದರಿಂದಲ್ಲವೇ ಇಷ್ಟೆಲ್ಲಾ ಆಲೋಚನೆ. ಸಂಸಾರವನ್ನು ಬಿಟ್ಟು ಬಂದಿದ್ದರೆ ಯಾವ ನಿರ್ಬಂಧವೂ ಇರುತ್ತಿರಲಿಲ್ಲ.

(ಎಂದು ಸ್ವಲ್ಪ ಹೊತ್ತು ಆಲೋಚಿಸಿ)

ಅಯ್ಯೋ, ನನಗೆ ಇದೇನು ಅವಿವೇಕವು ಬಂತು? ನಮ್ಮ ಗುರುಗಳಾದ ವ್ಯಾಸರಾಜರು ಮಾಡಿದ ಉಪದೇಶವನ್ನು ಮರೆತೆನಲ್ಲಾ. ತಾವರೆಯ ಎಲೆಯ ಜಲದಂತೆಯೂ ಗೇರುಹಣ್ಣಿ ಬೀಜದಂತೆಯೂ

ರಾಗ ಧನ್ಯಾಸಿ.

ಈಸಬೇಕೂ | ಇದ್ದು | ಜೈಸಬೇಕೂ ||ಪ||
ಹೇಸಿಕೆ ಸಂಸಾರದಲ್ಲಿ | ಆಶೆಲೇಸು ಇಲ್ಲದ ಹಾಗೆ ||ಅ||

ಸರಿಯೋ, ಆದರೆ, ಈಗ ಮಕ್ಕಳು ಹಸಿವಿನಿಂದ ಅಳುತ್ತಿವೆಯಲ್ಲ. ಅವಕ್ಕೆ ಅನ್ನವನ್ನು ಹವಣಿಸುವುದೆಲ್ಲಿ? ಈದಿನ ಎಲ್ಲಿಯೂ ಒಂದು ಕಾಳೂ ಭಿಕ್ಷವು ಹುಟ್ಟಲಿಲ್ಲ. ಆದರೇನು? ಎಲ್ಲರನ್ನೂ ಸಲಹಲು ಜಗತ್ಸೃಷ್ಟಿಕರ್ತನಾದ ಪರಮಾತ್ಮನೇ ಹೊಣೆಗಾರನಾಗಿರುವಾಗ ನಾವೇಕೆ ಕಳುಲಾತಿ ಪಡಬೇಕು?

ದೇವಾ, ನಿನ್ನನ್ನು ಮರೆಯದಿರಬೇಕೆಂದು ಒಳ್ಳೆಯ ಕೆಲಸ ಮಾಡಿರುವೆ. ನಿನ್ನ ಭಕ್ತರು ಭಂಗಪಡಲೇಬೇಕು. ಅನ್ನೋದಕವಸ್ತ್ರಗಳನ್ನು ಕಾಣದಿರಬೇಕು. ನಿನ್ನ ದಿವ್ಯಸಂಕಲ್ಪವೇ ಹೀಗೆ. ಆದುದರಿಂದ,

ರಾಗ-ಭೈರವಿ.

ಹರಿನೀ ನನಗೆ ಒಲಿವಂತೆ ಮಾಡು |
ಒಲಿದರೆ ತಿರಿವಂತೆ ಮಾಡು |
ತಿರಿದರೆ ಆರೂ ನೀಡದಂತೆ ಮಾಡು |
ಆರು ನೀಡಿದರೂ ಹೊಟ್ಟೆ ತುಂಬದಂತೆ ಮಾಡು |
ಹೊಟ್ಟೆತುಂಬಿದರೆ ಬಟ್ಟೆ ದೊರೆಯದಂತೆ ಮಾಡು |
ಬಟ್ಟೆ ದೊರೆತರೆ ಇಂಬು ದೊರೆಯದಂತೆ ಮಾಡು |
ಇಂಬುದೊರೆತರೆ ನಿನ್ನ ಪಾದಾರವಿಂದದಲಿ ಇಂಬು
ದೋರೋ ಪುರಂದರ ವಿಠಲಾ ||

ಪರಮಾತ್ಮನು ನನ್ನ ಬಳಿಗೆ ಕೊಡುವುದಕ್ಕೆ ಬಂದಿದ್ದನೇ ? ಇಲ್ಲ. ನನ್ನಿಂದ ತೆಗೆದುಕೊಂಡುಹೋಗಲು ಬಂದಿದ್ದನು. ಆಗ ನಾನು ಲೋಭಿಯಂತೆ ಮುಚ್ಚಿಟ್ಟುಕೊಂಡೆನು. ಕೊಡೆಂದು ಕೇಳಿದಷ್ಟೂ ಪರಮಾತ್ಮನು ದೂರವಾಗಿ ಹೋಗುವನು. ಆದುದರಿಂದ, ಸ್ವಾಮಿ, ನಿನಗೆ ನಾನೇ ಕೊಡುತ್ತೇನೆ. ತೆಗೆದುಕೋ. ಕೃಷ್ಣಾ, ನಿನ್ನ ಕೈಯಾರತೆರೆದದನ್ನು ನನ್ನಲ್ಲಿ ತೋರಿ ಭಕ್ತಿಯೆಂಬ ಬೆಣ್ಣೆಯ ಮುದ್ದೆಯನ್ನು ಕದ್ದೊಯ್ಯದೆ, ಎಲ್ಲಿ ಅಡಗಿಕೊಂಡಿರುವೆ ?

(ಎಂದು ಸುತ್ತಲೂ ನೋಡುವರು. ಎದುರಿಗೆ ಉಪ್ಪರಿಗೆಯ ಮನೆಯನ್ನು ನೋಡಿ)

ಈ ಮನೆಯೊಳಗೇನಾದರೂ ಅಡಗಿರುವನೋ ? ಇಲ್ಲಿ ಹೋಗಿ ನೋಡುವೆನು.

(ಉಪ್ಪರಿಗೆಯ ಮನೆಯ ಬಳಿಗೆ ಹೋಗಿ ಮುಂದೆ ನಿಂತು ಹಾಡುವರು)

ರಾಗ-ಮುಷ್ಣವಾವತಿ

ಅಮ್ಮ ನಿಮ್ಮ ಮನೆಗಳಲ್ಲಿ !
ನಮ್ಮ ರಂಗನ ಕಾಣಿರೇನಮ್ಮ ||ಪ||

ಕರದಲ್ಲಿ ಕಂಕಣ ಬೆರಳಲ್ಲಿ ಉಂಗುರ |
ಕೊರಳಲ್ಲಿ ಹಾಕಿದ ಹುಲಿಯುಗುರಮ್ಮ ||
ಅರಳೆಲೆ ಕನಕ ಕುಂಡಲ ಕಾಲಿಗಂದಿಗೆ |
ಉರಗಶಯನ ಬಂದ ಕಾಣಿರೇನಮ್ಮಾ || ೧ ||
ಕುಂಕುಮ ಕಸ್ತೂರಿ ಕುಡಿಕುಡಿ ನಾಮವು |
ಶಂಖ ಚಕ್ರಂಗಳ ಧರಿಸಿಹನಮ್ಮ ||
ಬಿಂಕದಿಂದಲಿ ಕೊಳಲೂದುತ್ತ ಪಾಡುತ್ತ |
ಪಂಕಜಾಕ್ಷನು ಬಂದ ಕಾಣಿರೇನಮ್ಮಾ || ೨ ||

ತೆತ್ತೀಸ ಕೋಟಿ ದೇವರ್ಕಳ ಒಡಗೂಡಿ |
ಹತ್ತವತಾರವ ನೆತ್ತಿದನಮ್ಮ ||
ಭಕ್ತವತ್ಸಲ ನಮ್ಮ ಪುರಂದರ ವಿಠ್ಠಲ |
ನಿತ್ಯೋತ್ಸವ ಬಂದ ಕಾಣಿರೇನಮ್ಮಾ || ೩ ||

(ಮನೆಯೊಳಗಿಂದ ಹೆಂಡತಿಯು ಪೀತಾಂಬರವನ್ನುಟ್ಟು ಒಡವೆ ವಸ್ತ್ರಗಳನ್ನು ಧರಿಸಿಕೊಂಡು ಬಂದು ಪುರಂದರದಾಸರಿಗೆ ನಮಸ್ಕಾರ ಮಾಡುವಳು)

ಪುರಂ (ಕಾಲನ್ನು ಹಿಂದಕ್ಕೆ ಸರಿದುಕೊಂಡು)—ದೀರ್ಘಸುಮಂಗಲೀಭವ. ದೇವರು ನಿಮಗೆ ಸಕಲಸಂಪತ್ತನ್ನೂ ಕೊಡಲಿ.

ಹೆಂ—ತಮ್ಮ ಅನುಗ್ರಹದಿಂದ ಸಕಲಸಂಪತ್ತನ್ನೂ ದೇವರು ದಯಪಾಲಿಸಿರುವನು. ನಾನು ತಮ್ಮ ಪಾದಸೇವಕಳಾದ ಪತ್ನಿಯು.

ಪುರಂ—ಇದೇನು ? ಆಶ್ಚರ್ಯ ! ಪುನಃ-ಈ ಉಪ್ಪರಿಗೆಯ ಮನೆ-ಒಡವೆ-ವಸ್ತ್ರ-ಇದೆಲ್ಲಾ ಹೇಗೆ ಬಂತು ?

ಹೆಂ—ನಾನು ಗುಡಿಸಲಿನಲ್ಲಿ ಹರುಕುಬಟ್ಟೆಯನ್ನು ಹೊಲಿಯುತ್ತಿದ್ದಾಗ ಯಾರೋ ತಮ್ಮನ್ನು ಹುಡುಕಿಕೊಂಡು ಬಂದರು. ಮಕ್ಕಳು ಹಸಿವೆಂದು ನನ್ನನ್ನು ಬಹಳ ಕಾಡುತ್ತಿದ್ದರು. ಬಹಳ ಬೇಸರಳಾದ ನಾನು ಎಲ್ಲಿಯೋ ವಿಠಲನ ಬಳಿಗೆ ಹೋಗಿರಬಹುದೆಂದು ಸಿಟ್ಟಿನಿಂದ ಹೇಳಿದೆನು. ಅನಂತರ, ನಿಮಗೆ ಇಲ್ಲಿ ಕಾಣುವಹಾಗೆ ಸುಧಾಮನಿಗೆ ಅನಂತೆ ಈ ಭಾಗ್ಯವೆಲ್ಲಾ ಬಂತು.

ಪುರಂ—ಆಹಾ, ಪರಮಾತ್ಮನು ನಮ್ಮನ್ನು ಪುನಃ ಪರೀಕ್ಷೆ ಮಾಡಲು ಬಂದಿದ್ದನು. ಇದೆಲ್ಲಾ ನೀನಾಡಿದ ನಿಂದಾ

ನುಡಿಯ ಫಲ. ಯಾರಿಗಾದರೂ ಈ ಸಂಪತ್ತನ್ನೆಲ್ಲಾ ಕೊಟ್ಟುಬಿಟ್ಟು ಹೊರಡೋಣ.

(ಕೆಲವು ಪುರನಿವಾಸಿಗಳ ಪ್ರವೇಶ)

ಪುರಂ—ಇಗೋ, ನೆನೆಸಿಕೊಂಡೊಡನೆಯೇ ಬಂದರು. ಮಹನೀಯರೇ, ಈ ಮನೆಯನ್ನೂ ಇದರಲ್ಲಿರುವ ವಿವಿಧ ಪದಾರ್ಥವನ್ನೂ ನಿಮಗೆ ಧಾರೆಯೆರೆದಿರುವೆನು. ದಯವಿಟ್ಟು ಸ್ವೀಕರಿಸಬೇಕು.

ಪುರನಿವಾಸಿಗಳು (ದಾಸರಿಗೆ ನಮಸ್ಕರಿಸಿ)—ಪೂಜ್ಯರೇ, ಎಲ್ಲಾ ಸಂಪತ್ತಿಗೂ ಗಣಿಯಂತಿದ್ದ ತಾವೇ ಅದನ್ನು ತೃಣವಾಗೆಣಿಸಿ ಎಲ್ಲವನ್ನೂ ತ್ಯಾಗಮಾಡಿ ಬಂದಿರುವಾಗ ನಮಗೆ ತಾನೇ ಏನು ಬೇಕಾಗಿದೆ? ನಾವೂ ತಮ್ಮನ್ನೇ ಹಿಂಬಾಲಿಸುವೆವು. ನಮ್ಮನ್ನುದ್ಧಾರ ಮಾಡಬೇಕು.

ಪುರಂ—ಇದೇನು ವಿಚಿತ್ರ! ಈ ಉಪ್ಪರಿಗೆಯ ಮನೆ-ಈ ಐಶ್ವರ್ಯ-ಇದನ್ನೆಲ್ಲಾ ಯಾವ ಲಕ್ಷ್ಮೀಪತಿಯು ಕೊಟ್ಟನೋ ಆತನೇ ಇದನ್ನೆಲ್ಲಾ ಹೇಗಾದರೂ ವಿನಿಯೋಗ ಮಾಡಲಿ. ಅದಕ್ಕೆ ನಮಗೆತ್ತಣ ಸ್ವಾತಂತ್ರ್ಯ? ನಾವು ಪರಮಾತ್ಮನ ಪಾದಾರವಿಂದಗಳನ್ನು ಹುಡುಕುವ ಕಾರ್ಯದಲ್ಲಿ ನಿರತರಾಗಿರೋಣ.

(ತೆರೆಯು ಬೀಳುವುದು)



## ನಾಲ್ಕನೆಯ ನೋಟ

---

ಊರು ಹೊರಗಿನ ದಾರಿ—ಒಂದು ಕೊನೆಯಲ್ಲಿ ಒಬ್ಬ ವೃದ್ಧನೂ ಆತನ ಹೆಂಡತಿಯೂ ಸತ್ತುಹೋಗಿರುವ ತಮ್ಮ ಮಗನ ಶವವನ್ನು ಹಾಕಿಕೊಂಡು ದುಃಖಪಡುತ್ತಿರುವರು.

ದಂಪತಿ—ಹಾ ಕಂದಾ, ಒಬ್ಬನೇ ಮಗನಾದ ನಿನ್ನನ್ನು ಕಳೆದುಕೊಂಡು ನಾವು ಭೂಮಿಯಲ್ಲಿ ಹೇಗೆ ಜೀವಿಸಿರಬೇಕು. ನನ್ನ ರತ್ನವೇ, ಅಪಾರವಾದ ದುಃಖಕ್ಕೀಡುಮಾಡಿ ಹೊರಟುಹೋಗಬಹುದೇ? ನಾವು ಇನ್ನೆಂತಹ ಪಾಪಿಗಳು! (ಶರೀರವನ್ನು ನೋಡುತ್ತಾ) ಹಾ ಬಾಲಾ, ನಾನಿನ್ನಾರನ್ನು 'ಮುದ್ದು ಕಂದ'ನೆಂದು ಕರೆಯಲಿ? ಇನ್ನಾರ ಮುದ್ದು ನುಡಿಗಳು ನನಗೆ ಸುಖವನ್ನು ತರುವುವು?

ವೃದ್ಧ—ಅಯ್ಯೋ, ದೇವಾ! ನೀನಿಷ್ಟು ಕಠಿಣನೋ? ವಂಶಕ್ಕೆಲ್ಲಾ ಒಬ್ಬನೇ ಆಗಿದ್ದ ಈ ಹಸುಳೆಯನ್ನು ಕೊಂಡೊಯ್ದೆಯಾ?

ದಂಪತಿ—ಹಾ ಕಂದಾ, ನಾನು ಬೇರೆ ಇನ್ನೊಂದು ಘಳಿಗೆಯೂ ಬದುಕಿರಲಾರೆನು.

(ಎಂದು ರೋದನೆ ಮಾಡುವಳು. ವೃದ್ಧನು ಎದ್ದು ಚಿತೆಯನ್ನು ಸಿದ್ಧಪಡಿಸಲು ಹೋಗುವನು. ಎದುರಿಗೆ ಪುರಂದರದಾಸರು ಪ್ರವೇ

ಶಿಸುವರು. ವೃದ್ಧನು ಅವರನ್ನು ನೋಡಿ ಅವರ ಪಾದಗಳಿಗೆ ನಮಸ್ಕಾರ ಮಾಡುವನು.)

ಪುರಂ—ವಂಶಾಭಿವೃದ್ಧಿರಸ್ತು.

(ಎಂದು ಆಶೀರ್ವಾದ ಮಾಡುವರು)

ವೃದ್ಧ (ದುಃಖದಿಂದ ಕಣ್ಣೀರು ಸುರಿಸುತ್ತಾ)--ಮಹಾನುಭಾವರೇ ತಮ್ಮ ಆಶೀರ್ವಾದವು ನನ್ನ ಸಂಕಟವನ್ನು ಇಮ್ಮಡಿಯಾಗಿ ಹೆಚ್ಚಿಸುತ್ತಿರುವುದು.

ಪುರಂ—ಅದೇನು, ಅಂತಹ ಸಂಕಟಕ್ಕೆ ಕಾರಣ ?

ವೃದ್ಧ—ನಮ್ಮ ವಂಶಕ್ಕೆಲ್ಲಾ ನನ್ನ ಮಗನೊಬ್ಬನೇ ಇದ್ದನು. ಅವನಿಗೂ ವಿಷಮಶೀತಜ್ವರ ಬಂದು ಮರಣವನ್ನು ಹೊಂದಿದನು. ಶವವನ್ನು ಹಾಕಿಕೊಂಡು ವೃದ್ಧಳಾದ ನನ್ನ ಹೆಂಡತಿಯು ಅಲ್ಲಿ—ಅಗೋ ಅಲ್ಲಿ—ರೋದನೆ ಮಾಡುತ್ತಾ ಇರುವಳು. ಚಿತೆಯನ್ನು ಸಿದ್ಧಪಡಿಸಲು ನಾನು ಹೊರಟಿದ್ದೆನು. ಹೀಗಿರುವಲ್ಲಿ ತಮ್ಮ ಆಶೀರ್ವಾದ ವಚನಗಳು ಆಶ್ಚರ್ಯವನ್ನೂ ದುಃಖವನ್ನೂ ಹೆಚ್ಚಿಸುತ್ತಿವೆ.

ಪುರಂ—ಪರಮಾತ್ಮನು ನನ್ನ ಬಾಯಿಂದ ನುಡಿಸಿದ ಮಾತು ಎಂದಿಗೂ ಸುಳ್ಳಾಗಲಾರದು. ಎಲ್ಲಿ, ನಿನ್ನ ಮಗನನ್ನು ನೋಡೋಣ, ನಡೆ.

(ಎಂದು ಇಬ್ಬರೂ ಮುಂದಕ್ಕೆ ಹೋಗುವರು.)

(ಪುರಂದರ ದಾಸರು ಮಗುವಿನ ಬಳಿಯಲ್ಲಿ ಕುಳಿತು)

ಪುರಂ—ದೇವಾ, ಅಪಮೃತ್ಯುಗಳನ್ನು ಪರಿಹಾರ ಮಾಡುವ ನಿನ್ನದಿದೇನು ಘನತೆ ? ಈ ಎಳೆಯ ಬಾಲಕನಾದರೋ ಏನೂ ಅರಿಯದ ಪಸುಳೆ. ಈ ಹಸು ಕೂಸು ಅಪಮೃತ್ಯುವಿಗೆ ತುತ್ತಾಗುವುದೇನು ಉಚಿತವೋ ! ತಂದೆ ತಾಯಿಗಳಾದರೋ ಬಹು ವೃದ್ಧರು. ಅವರ ಜೀವಮಾನದ ಅಂತ್ಯಕಾಲದಲ್ಲಿ ಅವರಿಗೆ ಸಂತೋಷವನ್ನೀವ ವಸ್ತುವೊಂದರೆ ಇದೊಂದೇ—ಈ ಹಸುಕಂದನೊಬ್ಬನೇ. ನೀನೇ ಕೊಟ್ಟ ಈ ಮಗುವನ್ನು ಸೆಳೆದೊಯ್ದರೆ ಬೇಲಿಯು ಹೊಲಮೇದಂತಾಗದೇ ?

ರಾಗ-ಕಲ್ಯಾಣಿ ಅಟತಾಳ

ಸಲ್ಲದೊ ಕೃಷ್ಣ ಸಲ್ಲದೋ ॥ ಪಲ್ಲ ॥ ಸಿರಿ
ವಲ್ಲಭ ಇದನೋಡಿ ಪಾಲಿಸಬೇಕೆಲೊ ॥ ಅನು ॥
ಬಿತ್ತಿ ಬೆಳೆಸಿ ತಲೆಯೆತ್ತಿದ ಪೈರನ್ನು ।
ಮತ್ತೆ ತುರುವಿಂಡು ಬಿಟ್ಟು ಮೆಲ್ಲಿಸುವುದು ॥೧॥
ಸಾವಿರ ಹೊನ್ನಿಕ್ಕಿ ಸದನವ ಸಾಧಿಸಿ ।
ಪಾವಕನುರಿಗೆ ನೀನೊಪ್ಪಿಸಿ ಕೊಡುವುದು ॥೨॥
ಕುಶಲದಿ ಬಣ್ಣಿಸಿ ಬರೆದು ಚಿತ್ತಾರವ ।
ಮಸಿ ಮಣ್ಣುಮಾಡಿ ನೀ ಕೆಡಿಸುವುದು ॥೩॥
ಬಲುಕಾಲ ಮುದ್ದಿಸಿ ಕಲಿಸಿ ಮಾತುಗಳ ।
ಗಿಳಿಯು ಸಾಕಿ ಬಾವುಗೆಗೆ ಒಪ್ಪಿಸುವುದು ॥೪॥
ಕರುಣೆಸು ಸಿರಿ ಪುರಂದರ ವಿಠಲ ನಮ್ಮ ।
ಹಿರಿದು ಮಾಡಿ ಮತ್ತೆ ಕಿರಿದು ಮಾಡುವುದು ॥೫॥

(ಹೀಗೆಂದು ಬಾಲಕನ ಮೈಮೇಲೆ ಕೈಯಾಡಿಸುವರು. ಹುಡುಗನು ಸ್ವಲ್ಪ ಕೈ ಕಾಲು ಅಲ್ಲಾಡಿಸುವನು. ತಂದೆ ತಾಯಿಗಳು ಆಶ್ಚರ್ಯದಿಂದ ನೋಡುತ್ತಿರುವರು. ಹುಡುಗನು ಎದ್ದು ನಿಂತುಕೊಳ್ಳುವನು. ಒಡನೆಯೇ ತಾಯಿಯು ಓಡಿ ಬಂದು ಮಗನನ್ನು ಅಪ್ಪಿಕೊಂಡು ಮುದ್ದಾಡುತ್ತಾ)

ತಾಯಿ—ಕಂದಾ, ಎನ್ನ ಮುದ್ದು ಕಂದಾ. ಬದುಕಿದೆಯಾ ? ನನ್ನ ಚಿನ್ನ, ನನ್ನ ರನ್ನ, ಎಲ್ಲಿ ನಿನ್ನ ಮುದ್ದು ಮುಖವನ್ನು ನೋಡಿ ಆನಂದ ಪಡುವೆನು. ನನ್ನ ಸಿರಿಯೇ, ನಿನಗೆ ಮುದ್ದಿಡುವೆನು, ಬಾ.

ತಂದೆ—(ಮಗುವನ್ನು ಮುದ್ದಾಡುತ್ತಾ)—ಮುದ್ದು ಕುವರ, ನಮ್ಮ ಆಶೆಯನ್ನೆಲ್ಲಾ ಮುಳುಗಿಸಿ ಎಲ್ಲಿಗೆ ಹೊರಟು ಹೋಗಿದ್ದೆ ? ಕಂದಾ, ನಿನ್ನ ಅಂದವಾದ ಹೆಂದುಟಿಗಳನ್ನು ಮುದ್ದಾಡಿ ಆನಂದ ಪಡುವೆನು.

(ಹೀಗೆಂದು ಸ್ವಲ್ಪಹೊತ್ತು ತಂದೆ ತಾಯಿಗಳು ಮಗನನ್ನು ಮುದ್ದಿಸಿದ್ದಾದ ಮೇಲೆ ಎಲ್ಲರೂ ಬಂದು ಪುರಂದರ ದಾಸರಿಗೆ ನಮಸ್ಕಾರ ಮಾಡುವರು. ವೃದ್ಧನು ಎದ್ದು ಕೈ ಜೋಡಿಸಿಕೊಂಡು ಪುರಂದರ ದಾಸರೆದುರಿಗೆ ಮಾತನಾಡುವನು)

ವೃದ್ಧ—ಮಹಾನುಭಾವರೇ, ತಮ್ಮ ಉಪಕಾರಕ್ಕಾಗಿ ನಾವು ಎಷ್ಟೆಷ್ಟು ಕೃತಜ್ಞರಾಗಿದ್ದರೂ ಸಾಲದು. ನಮ್ಮ ಸಕಲ ಆಶೆಯೂ ಆಗಿರುವ ಈ ಮಗನು ಮೃತಪಟ್ಟು ನಮ್ಮನ್ನು ಅಪಾರವಾದ ದುಃಖಕ್ಕೀಡು ಮಾಡಿದ್ದಾಗ ಅವನನ್ನು ತಾವು ಪುನಃ ಬದುಕಿಸಿ ನಮ್ಮನ್ನು ಉದ್ಧಾರ ಮಾಡಿದಿರಿ. ನಿಮ್ಮ ಮಹಿಮೆಯು ಅಸಾಧಾರಣವಾದುದು.

ಪುರಂ—ನನ್ನನ್ನೇಕೆ ಸ್ತೋತ್ರ ಮಾಡುವಿರಿ ? ಎಲ್ಲವೂ ಕಾರುಣ್ಯಸಿಂಧುವಾದ ಹರಿಯು ದಯದಿಂದ ನಡೆಯುವುದಲ್ಲದೆ ಮನುಷ್ಯನೇ ಸ್ವತಂತ್ರವಾಗಿ ಏನೂ ಮಾಡಲಾರನು.

ವೃದ್ಧ—ತಾವೇನಾದರೂ ಹೇಳಿ. ಈ ಬಾಲಕ—ಈ ಮುದ್ದು ಕಂದ—ಈ ಚಿನ್ನ—ಈ ನನ್ನ ರನ್ನ—ಮೃತಿಹೊಂದಿದ್ದ ಈ ನಮ್ಮ ಸಮಸ್ತ ಜೀವನಾಧಾರ—ಸಕಲ ಸಂತೋಷಕ್ಕೆ ಕಾರಣವಾಗಿದ್ದ ಈ ಹಸು ಕೂಸನ್ನು—ಕಳೆದು ಹೋಗಿದ್ದ ಈ ಪ್ರೀತಿಯ ಪಡವೆಯನ್ನು—ಪುನಃ ತಂದು ಕೊಟ್ಟುದಕ್ಕಾಗಿ ?

ಮ್ಮನ್ನು ನಾವು ವಂಶಪಾರಂಪರ್ಯವಾಗಿ ಸ್ಮರಣೆ ಮಾಡು ವೆವು.

ಪುರಂ—ಎಷ್ಟು ಹೇಳಿದರೂ. ಇವರು ಕೇವಲ ಮನುಷ್ಯ ಮಾತ್ರದವನಾದ ನನ್ನನ್ನು ಹೊಗಳುತ್ತಿರುವರು. ದೇವಾ,

**ರಾಗ-ಶಂಕರಾಭರಣ ಅಟತಾಳ**

ನೀನೆ ದಯಾಪರನೊ ನಿನ್ನವರ ಸಾಧನವೊ ||ಪ||
ಮುದ್ದು ಹಯವದನ ಸುಖಸದನ ಕೇಳಿದನ ||ಅನು||
ಮದಕರಿಯು ಸರಸಿಯೊಳು ಮಕರಿ ಬಾಧೆಗೆ ಸಿಲುಕಿ |
ಪದುಮೇಶ ಪದುಮಾಕ್ಷ ಪದುಮನಾಭ |
ಪದುಮ ಸಂಭವನಯ್ಯ ಪಾಹಿ ಪಾಹಿ ಎನಲು |
ಒದಗಿ ಪಾಲಿಸಿದೆ ತವದಯವೊ ಸಾಧನವೊ || ||
ಅಂತ್ಯಜಳ ಸಹವಾಸದಿ ವಿಪ್ರವರನೊಬ್ಬ |
ಸಂತೋಷದಿಂದ ಬಹು ಕಾಲ ಕಳೆದು |
ಪ್ರಾಂತ್ಯ ಕಾಲಕೆ ತನ್ನ ಮಗನ ಕರೆಯಲು ಕಾಯ್ದೆ |
ಕಂತು ಜನಕ ನಿನ್ನ ದಯವೊ ಸಾಧನವೊ ||೨||
ಅವರವರ ಯೋಗ್ಯತೆಯನರಿತು ಪ್ರೇರಕನಾಗಿ |
ಅವರಿಂದ ನುಡಿಸಿ ಅವರ ನುಡಿಗಳಿಗೆ ಹಿಗ್ಗಿ |
ಅವರಿಗೊಲಿವೆ ನಮ್ಮ ಪುರಂದರ ವಿಠಲ |
ಅವನೀಶನೆ ನಿನ್ನ ದಯವೊ ಸಾಧನವೊ ||೩||

(ತೆರೆಯು ಬೀಳುವುದು)

## — ಆರನೆಯ ನೋಟ —

(ನದಿಯ ದಡದಲ್ಲಿ ಮೇಲುಗಡೆ ಕೃಷ್ಣಭಟ್ಟನು ನದಿಯಲ್ಲಿ ಸ್ನಾನಮಾಡಿ ಬರುತ್ತಿರುವನು)

ಕೃಷ್ಣ—ಗೋಕುಲಾನಂದ, ಗೋಪೀಜನಲೋಲ, ಗೋಪೀನಾಥ.—

(ಗೋಪಿಯೆಂಬ ಹೆಂಗಸು ಪ್ರವೇಶಿಸುವಳು.)

ಗೋಪಿ—ಏಕೆ, ಇಷ್ಟು ಆತ್ಮಸ್ತುತಿ ?

ಕೃ—ಗೋಪೀ, ಇದೇನು ಇಷ್ಟು ಹೊತ್ತಿನಲ್ಲಿ ಇಲ್ಲಿಗೇಕೆ ಬಂದೆ ?

ಗೋ—ಏಕೆ ? ಬರಬಾರದೋ ?

ಕೃ—ಹಾಗಲ್ಲ, ಗೋಪೀ, ಈಗ ಇಲ್ಲಿ ಜನಗಳು ಓಡಾಡುತ್ತಿರುವರು. ಇಷ್ಟು ಹೊತ್ತಿನಲ್ಲಿ ನಾವಿಬ್ಬರೇ ಇಲ್ಲಿ ಮಾತನಾಡುತ್ತಿದ್ದರೆ ಮಂದಿ ಏನೆಂದು ತಿಳಿದಾರು ? ಆ ಮೇಲೆ ನನ್ನನ್ನೇನೆಂದು ಕರೆದಾರು ?

ಕೃ—ಕರೆಯುವುದೇನು ? ನೀವೇ ಮುಂಚೆ ಹೇಳಿಕೊಂಡಂತೆ ಗೋಪೀನಾಥನೆಂದೇ ಕರೆಯುವರು.

ಕೃ—(ಅವಳ ಗಲ್ಲವನ್ನು ಸವರುತ್ತಾ) ಮೋಹನಾಂಗೀ,—

ಗೋ—ನೀವು ಪಂಡಿತರು. "ಮೋಹನಾಂಗೀ" "ಕನಕಾಂಗೀ" ಈ ವರ್ಣನೆಗಳಿಗೇನು ? 'ಕನಕಾಂಗಿ' ಎಂದು ಕರೆಯುವಿರಲ್ಲಾ. ಕನಕದ ಆಭರಣಗಳನ್ನು ಎಷ್ಟೆಷ್ಟು ಮಾಡಿಸಿಕೊಟ್ಟಿರುವಿರಿ ? (ಎಂದು ಮೋರೆಯನ್ನೂ ಕೈಯನ್ನೂ ತಿರುವುತ್ತಾ) ನಾಚಿಕೆಗೇಡು! ಇದೆಲ್ಲಾ ನನಗೆ ಸರಿ ಬೀಳದು.

ಕೃ—ಗೋಪೀ, ಇದಕ್ಕೇಕೆ ಇಷ್ಟು ಸಿಟ್ಟು ಮಾಡುವೆ? ನಾನು ಅದೇ ಕೆಲಸದಲ್ಲಿಯೇ ಇದ್ದೇನೆ.

ಗೋ—ನಿಜ. ಆದುದರಿಂದಲೇ ಈಗ ಎರಡು ಮೂರು ದಿನಗಳಿಂದ ನಮ್ಮ ಮನೆಯ ಕಡೆಯೇ ಸವಾರಿ ದಯಮಾಡಿಸಲಿಲ್ಲವೇನೊ? ನಿಮ್ಮನ್ನು ಹಿಡಿದು ಹಾಕಬೇಕೆಂದು ನದಿಯ ಸ್ನಾನಕ್ಕೂ ಅಶ್ವತ್ಥ ಪ್ರದಕ್ಷಿಣೆ ನಮಸ್ಕಾರಕ್ಕೂ ಹೋಗಿ ಬರುವೆನೆಂದು ನನ್ನ ಗಂಡನೊಡನೆ ಸುಳ್ಳು ಹೇಳಿ ಅಂದಿನಿಂದಲೂ ಬಂದು ಕಾಯುತ್ತಿದ್ದೆ. ಈ ದಿನ ನದಿಯಲ್ಲಿ ನೀವು ಸ್ನಾನಮಾಡುತ್ತಿರುವುದನ್ನು ನೋಡಿದೆನು. ನಾನು ನದಿಯಲ್ಲಿ ಮೈ ತೊಳೆದುಕೊಳ್ಳುತ್ತಿರುವಾಗ ನಿಮ್ಮನ್ನು

ಹಿಡಿಯಬೇಕೆಂಬ ಆಲೋಚನೆಯೇ, ನನಗೆ ಈ ರೀತಿ ಮೋಸಮಾಡಿ ಹೋದರೆ ನಾನೇನು ಸುಮ್ಮನೆ ಬಿಡುವಳಲ್ಲ (ಎಂದು ಧೋತ್ರದ ಶರಗನ್ನು ಹಿಡಿಯುವುದಕ್ಕೆ ಹೋಗುವಳು)

ಕೃ—(ಕೊಸರಿಕೊಂಡು) – ಸುಳ್ಳಲ್ಲ, ಗೋಪೀ, ನಾನು ಮೂರುದಿನದಿಂದ ಊರಲ್ಲಿರಲಿಲ್ಲ. ಆಸ್ತಿವಂತನಾದ ನನ್ನ ಸ್ನೇಹಿತನೊಬ್ಬನು ಮೃತಪಟ್ಟನು. ಅವನ ಮರಣ ಕಾಲದಲ್ಲಿ ನನಗೆ ಅವನ ಆಸ್ತಿಯಲ್ಲಿ ಸ್ವಲ್ಪ ಭಾಗವು ಬರುವಂತೆ ತಕ್ಕ ಕಾಗದ ಪತ್ರಗಳನ್ನು ಸೃಷ್ಟಿಮಾಡಿ ಬಂದಿದ್ದೇನೆ.

ಗೋ—(ಆತ್ಮಗತ) – ಸೃಷ್ಟಿ! ಅಯ್ಯೋ, ಭ್ರಷ್ಟಾ!

ಕೃ—ಅಷ್ಟೇ ಅಲ್ಲ. ಈ ರತ್ನದ ಹಾರವನ್ನು ಆತನ ಮಗನಿಗೆ ಕಾಣದಂತೆ ನಿನಗೋಸ್ಕರ ತಂದಿರುವೆನು. ತೆಗೆದುಕೊ. (ಎಂದು ಕೊರಳಿಗೆ ಹಾರವನ್ನು ಹಾಕುವನು)

ಗೋ-(ವೈಯಾರದಿಂದ ಬೆಡಗನ್ನು ತೋರಿಸುತ್ತಾ) — ಆಹಾ, ನಿಮ್ಮ ಪ್ರೀತಿಯೇ ಪ್ರೀತಿ. ಈಗ ಬೇಕಾದರೆ, ರತ್ನಾಂಗಿಯೊಂದಾದರೂ ಕರೆಯಿರಿ.

ಕೃ-(ತೆರೆಯ ಕಡೆ ನೋಡಿ)-ಗೋಪೀ, ಅಲ್ಲಿ ಯಾರೋ ಬರುತ್ತಿರುವರು. ನೀನು ಇನ್ನು ಹೊರಡು.

ಗೋ—ಇದಕ್ಕೇಕೆ ಇಷ್ಟು ಆಲೋಚನೆ? ನಾನು ಮೊದಲೇ ಇದಕ್ಕೆ ಬೇಕಾದ ಸಲಕರಣೆಗಳೊಡನೆ ತಕ್ಕ ಏರ್ಪಾಡು ಮಾಡಿಕೊಂಡಿದ್ದೇನೆ. ಅಕ್ಕೋ, ಅಲ್ಲಿ ನೋಡಿ. ಆ ಅಶ್ವತ್ಥಪ್ರದಕ್ಷಿಣೆ ಮಾಡಲು ಹೊರಡುವೆನು. ನೀವು ಇಲ್ಲಿಯೇ ಕೂತಿದ್ದರೆ ನಿಮ್ಮನ್ನು ನಾನು ನೋಡುತ್ತಿರಬಹುದು.

(ಎಂದು ಅಶ್ವತ್ಥ ವೃಕ್ಷದ ಬಳಿಗೆ ಹೋಗಿ ಪ್ರದಕ್ಷಿಣೆ ನಮಸ್ಕಾರ ಹಾಕುತ್ತಿರುವಳು)

ಕೃ-(ಘಟ್ಟಿಯಾಗಿ)-ಆಹಾ, ಉಷಃಕಾಲ-ಎಷ್ಟು ಪ್ರಶಸ್ತವಾಗಿದೆ! (ಗದಗದ ನಡುಗುತ್ತಾ) ನದಿಯಲ್ಲಿ ಸ್ನಾನಮಾಡಿಗುದಾಯಿತು.

**(ಪದ್ಮಾಸನವನ್ನು ಹಾಕಿಕೊಂಡು ಕಣ್ಣು ಮುಚ್ಚಿಕೊಂಡು ಜಪ ಮಾಡುವವನಂತೆ ಕುಳಿತುಕೊಳ್ಳುವನು. ಕೆಲವು ಜನಗಳು ಪ್ರವೇಶಿಸುವರು)**

ಜನಗಳು — ಆಹಾ, ಎಂತಹ ಮಹಾನುಭಾವರು! ಏನು ದೈವಭಕ್ತಿ! ಪರಮಾತ್ಮನಲ್ಲಿಯೇ ಮನಸ್ಸನ್ನು ನೆಲೆಯಾಗಿಟ್ಟಿರುವರು.

**(ಕೆಲವರು ಕೃಷ್ಣಭಟ್ಟನಿಗೆ ನಮಸ್ಕಾರ ಮಾಡುವರು)**

ಜನಗಳು- **(ಅಶ್ವತ್ಥ ವೃಕ್ಷದ ಕಡೆ ನೋಡಿ)**—ಆಹಾ, ಎಂತಹ ದೈವಭಕ್ತಳಾದ ಸಾಧ್ವೀಮಣಿ! ಇಂತಹ ಸತಿಯನ್ನು ಪಡೆದ ಪತಿಯು ಏನು ಧನ್ಯನೋ!

**(ಪುರಂದರ ದಾಸರ ಪ್ರವೇಶ)**

ಪುರಂ—**(ಸ್ವಲ್ಪ ಹೊತ್ತು ಸುತ್ತಲೂ ನೋಡಿ)**

ರಾಗ. ಪಂತುವರಾಳಿ. ಏಕತಾಳ.

ನಗೆಯು ಬರುತಿದೆ ಎನಗೆ ನಗೆಯು ಬರುತಿದೆ ||ಪ||

ಜಗದೊಳಿರುವ ಜಾಣರೆಲ್ಲ ಹಗರಣಮಾಡುವುದ ಕಂಡು ||ಅ||

**(ಕೃಷ್ಣಭಟ್ಟನ ಕಡೆಗೆ ತಿರುಗಿ)**

ಪರರ ವನಿತೆಯೊಲಿಮೆಗೊಲಿದು |
ಹರುಷದಿಂದ ಅವಳ ಬೆರೆದು |
ಹರಿವ ನೀರನೊಳಗೆ ಮುಳುಗಿ |
ಬೆರಳನೆಣಿಸುತಿಹರ ಕಂಡು || ೧ ||

**(ಅಶ್ವತ್ಥ ವೃಕ್ಷದ ಕಡೆಗೆ ತಿರುಗಿ)**

ಪತಿಯ ಸೇವೆ ಬಿಟ್ಟು ಪರ |
ಪತಿಯ ಕೂಡೆ ಸರಸವಾಡಿ |
ಸತತ ಮೈಯ ತೊಳೆದು ಹಲವು |
ವ್ರತವ ಮಾಳ್ಪ ಸತಿಯ ಕಂಡು || ೨ ||

**(ಮುಖ ನೋಡುತ್ತಾ)**

ಹೀನ ಗುಣವ ಮನದೊಳಿಟ್ಟು |
ತಾನು ವಿಷ-ಪುಂಜನಾಗಿ |
ಮೌನಿ ಪುರಂದರ ವಿಠ್ಠಲನ್ನ |
ಧ್ಯಾನ ಮಾಡುವವನ ಕಂಡು ‖ ೩ ‖

(ಪುರಂದರದಾಸರು ಹೊರಟುಹೋಗುವರು. ಅಲ್ಲಿರುವವರು ಒಬ್ಬರ ಮುಖವನ್ನೊಬ್ಬರು ನೋಡುತ್ತಾ ಬೆರಗಾಗುವರು)

ಒಬ್ಬ (ಮೆಲ್ಲಗೆ)—ದಾಸರು ಭಟ್ಟರನ್ನು ನೋಡಿ ಏನೋ ಹೇಳಿ ಹೊರಟುಹೋದರಲ್ಲಾ.

ಇನ್ನೊಬ್ಬ—ಅಶ್ವತ್ಥವೃಕ್ಷದ ಕಡೆ ನೋಡಿ ಆ ಹೆಂಗಸನ್ನು ಕುರಿತು ಆಡಿದ ಮಾತನ್ನು ಕೇಳಿದಿರಾ ?

ಮೊದಲನೆಯವ—ಅಲ್ಲಿ ಕಾಣುವ ಗೋಡೆಯ ಮರೆಯಲ್ಲಿ ನಿಂತು ನೋಡೋಣ ಬನ್ನಿ.

(ಬಂದಿದ್ದವರೆಲ್ಲಾ ಹೊರಟುಹೋಗುವರು. ಇವರಲ್ಲಿ ಕೆಲವರು ಪಕ್ಕದಲ್ಲಿರುವ ಗೋಡೆಯ ಹಿಂದೆ ಮರೆಯಾಗಿ ನಿಲ್ಲುವರು. ಗೋಪಿಯು ಕೃಷ್ಣಭಟ್ಟನ ಕಡೆಗೆ ಬರುವಳು)

**(ಗೋಡೆಯ ಹಿಂದೆ ನಿಂತಿದ್ದವರಲ್ಲಿ ಒಬ್ಬನು ಇನ್ನೊಬ್ಬನನ್ನು ಕುರಿತು)**—ಇದೇನ್ರೀ, ಈಕೆ ನಮ್ಮ ಧೋಂಡೂರಾಯರ ಹೆಂಡತಿ ಗೋಪೀಬಾಯಿ ಅಲ್ಲವೇನ್ರೀ ?

(ಗೋಪಿಯು ಕೃಷ್ಣಭಟ್ಟನ ಗಲ್ಲವನ್ನು ಹಿಡಿದೆತ್ತುವಳು)

ಗೋ—ಏಳಿ. ಸಾಕು. ಎಲ್ಲರೂ ತೊಲಗಿಹೋದರು.

(ಕೃಷ್ಣಭಟ್ಟನು ಕಣ್ಣುಬಿಟ್ಟು ಸುತ್ತಲೂ ನೋಡಿ ಎದ್ದು)

ಕೃ—ಗೋಪೀ....

**(ಗೋಡೆಯ ಹಿಂದೆ)**—ಇದೇನ್ರೀ, ಇವರು ನಮ್ಮ ಪುರೋಹಿತರು ಕೃಷ್ಣಭಟ್ಟರು !

ಕೃ—ಗೋಪೀ, ನೀನು ಬಹು ಚತುರೆ.

(ಕೃಷ್ಣಭಟ್ಟನು ಗೋಪಿಯ ಕೆನ್ನೆಯನ್ನು ಕೈಯಿಂದ ಸವರುತ್ತಾ ಸರಸವಾಡುವನು)

(ಗೋಡೆಯ ಹಿಂದೆ)—ಅಯ್ಯೋ ಇದೇನು ಅವಿವೇಕ? ಇದನ್ನು ನೋಡಿಯೇ ಪುರಂದರದಾಸರು ಈರೀತಿ ನುಡಿದು ಹೋಗಿರುವರು. ದಾಸರ ಬಳಿಗೆ ನಾವು ಹೋಗಿ ಉಪದೇಶವನ್ನು ತೆಗೆದುಕೊಳ್ಳೋಣ.

(ಗೋಡೆಯ ಹಿಂದೆ ನಿಂತಿದ್ದವರು ಹೊರಟುಹೋಗುವರು. ಕೃಷ್ಣಭಟ್ಟನೂ ಗೋಪಿಯೂ ಸರಸವಾಡುತ್ತಿರುವರು)

(ಒಬ್ಬ ಸನ್ಯಾಸಿಯು ಒಂದು ದೊಡ್ಡ ದೇವರ ಪೆಟ್ಟಿಗೆಯನ್ನು ಕೌಂಕುಳಲ್ಲಿಟ್ಟುಕೊಂಡು ಬರುವನು. ಗೋಪಿಯು ಸರಸವನ್ನು ನಿಲ್ಲಿಸಿ ಫಲತಾಂಬೂಲಗಳನ್ನು ಕೃಷ್ಣಭಟ್ಟನಿಗೆ ಕೊಟ್ಟು ನಮಸ್ಕರಿಸುವಳು. ಕೃಷ್ಣಭಟ್ಟನು ಹೊರಟು ಹೋಗುವನು)

ಸನ್ಯಾ—ಏನು ಗೋಪೀ, ಇಲ್ಲಿ ಕೃಷ್ಣಭಟ್ಟನೊಡನೆ ಒಬ್ಬಳೇ ನಿಂತಿದ್ದೆಯಲ್ಲಾ?

ಗೋ (ವೈಯಾರದಿಂದ)—ತಮಗೆ ಗೊತ್ತಿಲ್ಲವೇ? ತಾವು ಸ್ನಾನಕ್ಕೆ ಬರುವಿರೆಂದೇ ಕಾಯುತ್ತಿದ್ದೆ. ನೋಡುವವರಿಗೆ ಅನುಮಾನ ತಟ್ಟದಂತೆ ಅಶ್ವತ್ಥ ಪ್ರದಕ್ಷಿಣೆಯ ನೆವದಿಂದ ಕಾಲಹರಣ ಮಾಡುತ್ತಿದ್ದೆ. ಆದಕ್ಕೇ ಪುರೋಹಿತರಿಗೆ ತಮ್ಮೆದುರಿಗೇ ಫಲತಾಂಬೂಲಗಳನ್ನು ಕೊಟ್ಟು ಕಳುಹಿಸಿದೆನಲ್ಲಾ!

ಸ—ಕಡುಸುಂದರೀ (ಎಂದು ಗಲ್ಲವನ್ನು ಸವರುತ್ತಾ) ನಾನು ಇಗೋ ಈ ಮಂಟಪದಲ್ಲಿ ದೇವತಾರ್ಚನೆಗೆ ಕೂತುಕೊ

ಳ್ಳುವೆನು. ಜನಗಳು ಬಂದು ಕಾಣಿಕೆಗಳನ್ನರ್ಪಿಸುವಂತೆ ಏರ್ಪಾಡು ಮಾಡು.

(ಗೋಪಿಯು ಹೊರಟುಹೋಗುವಳು. ಕೆಲವರು ಶಿಷ್ಯರು ಬರುವರು. ಸನ್ಯಾಸಿಯು ದೇವರ ಪೆಟ್ಟಿಗೆಯಲ್ಲಿರುವ ಪ್ರತಿಮೆಗಳನ್ನು ಬಹು ಆಡಂಬರದಿಂದ ಸಾಲುಸಾಲಾಗಿಟ್ಟು ದೀಪಗಳನ್ನು ಹಚ್ಚಿ ಪೂಜೆಗೆ ಕುಳಿತುಕೊಳ್ಳುವನು. ಒಬ್ಬ ಗೃಹಸ್ಥನು ಪ್ರವೇಶಿಸುವನು)

ಗೃಹಸ್ಥ (ನಮಸ್ಕರಿಸಿ)—ಸ್ವಾಮಿಾ, ನನಗೆ ಉಪದೇಶವನ್ನು ಮಾಡಬೇಕು.

ಸನ್ಯಾಸಿ—ನೀನು ಸಂಸ್ಕೃತದಲ್ಲಿ ಯಾವ ಯಾವ ಗ್ರಂಥಗಳನ್ನು ಓದಿದ್ದೀಯೆ ? ನಿನಗೆ ವ್ಯಾಕರಣದಲ್ಲಿ ಚೆನ್ನಾಗಿ ಪರಿಶ್ರಮವುಂಟೇ ?

ಗೃ—ಸ್ವಾಮಿಾ ನನಗೆ ಸಂಸ್ಕೃತ ಅಭ್ಯಾಸವಿಲ್ಲ.

ಸ—ಛೀ, ಭ್ರಷ್ಟಾ, ನಿನಗೆ ಯಾವ ಪಾಂಡಿತ್ಯವಿದೆಯೆಂದು ನನ್ನ ಬಳಿಗೆ ಬಂದೆ ? ಪೂರ್ತಿಯಾಗಿ ಸಂಸ್ಕೃತ ಜ್ಞಾನವಿಲ್ಲದೆ ನಿನಗೆ ದೇವರಸೇವೆ ಮಾಡುವ ವಿಷಯದಲ್ಲಿ ಉಪದೇಶವ್ರೋ ?—(ಶಿಷ್ಯರ ಕಡೆ ತಿರುಗಿ) ಎಲಾ, ತಳ್ಳಿ ಈತನನ್ನು ಆಚೆಗೆ.

(ಶಿಷ್ಯರು ಆತನನ್ನು ದೂರವಾಗಿ ತಳ್ಳುವರು. ಗೋಪಿಯೂ ಮತ್ತೆ ಕೆಲವು ಹೆಂಗಸರೂ ಪ್ರವೇಶಿಸುವರು)

ಗೋಪಿ—ರಂಗೂಬಾಯಿಾ, ನೋಡಿದಿರಾ ? ಯತಿಗಳ ಮುಖದಮೇಲೆ ಎಂತಹ ತೇಜಸ್ಸು !

ರಂಗೂ—ಆಹಾ, ಏನು ವೈರಾಗ್ಯಶಾಲಿಗಳಮ್ಮಾ !

ಗೋ—ಅವರಿಗೇನು ಬೇಕಾಗಿದೆ ? ಆ ಕೃಷ್ಣನ ಪ್ರತಿಮೆ ನೋಡ್ರೇ ! ಅದರ ಕೊರಳಿಗೆ ಒಂದು ರತ್ನದ ಹಾರವನ್ನು

ಹಾಕಿದರೆ, ಎಷ್ಟು ಚೆನ್ನಾಗಿರುತ್ತದೆ !
(ಎಂದು ತನ್ನ ಕೊರಳಲ್ಲಿರುವ ರತ್ನದ ಹಾರವನ್ನು ತೆಗೆದು ಯತಿಗಳ ಬಳಿಯಲ್ಲಿಡುವಳು. ಉಳಿದ ಹೆಂಗಸರೂ ಸರ, ಗೆಜ್ಜೆ ಮೊದಲಾದ ಒಡವೆಗಳನ್ನು ಕೊಡುವರು)

(ಪುರಂದರ ದಾಸರ ಪ್ರವೇಶ)

ಪು—

ರಾಗ—ನಾದನಾಮಕ್ರಿಯ

ಉದರ ವೈರಾಗ್ಯವಿದು ನಮ್ಮ
ಪದುಮನಾಭನಲ್ಲಿ ಲೇಶ ಭಕುತಿಯಿಲ್ಲ ॥ ಪ ॥

ಶಿಷ್ಯರು (ಒಬ್ಬರನ್ನು ಕುರಿತೊಬ್ಬರು)—ಇದೇನೋ ದಾಸ ಒದರುತ್ತಿದ್ದಾನೆ ?

ಪು— ಕಂಚುಗಾರನ ಬಿಡಾರದಂದದಿ ।
ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ ।
ಮಿಂಚಬೇಕೆಂದು ಬಲು ಜ್ಯೋತಿಗಳನೆ ಹಚ್ಚಿ ।
ವಂಚನೆಯಿಂದಲಿ ಪೂಜೆಯ ಮಾಡುವುದು ॥ ೧ ॥

೧ನೇ ಶಿಷ್ಯ—ಏನು ದಾಸರೇ ? ಇದೇನು ದೋಷಾರೋಪಣೆ? ಯತಿಗಳ ಜಪ, ಧ್ಯಾನಗಳನ್ನು ನೋಡಿ.

ಪು— ಕರದಲಿ ಜಪಮಣಿ ಬಾಯಲಿ ಮಂತ್ರವು ।
ಅರಿವೆ ಮುಸುಕು ಮೋರೆಗೆ ಹಾಕಿ ।
ಪರಸತಿಯರ ಗುಣ ಮನದಲಿ ಸ್ಮರಿಸುತ ।
ಪರಮವೈರಾಗ್ಯಶಾಲಿಯೆಂದೆನಿಸುವುದು ॥ ೨ ॥

೨ನೇ ಶಿಷ್ಯ—ನಮ್ಮ ಯತಿಗಳನ್ನು ಅಸೂಯೆಯಿಂದ ಏಕೆ ದೂರುವಿರಿ ? ಅವರ ವಿಸ್ತಾರವಾದ ದೇವತಾರ್ಚನೆಯನ್ನು ನೋಡಿ.

ಪು— ಬೂಟಕತನದಲಿ ಬಹಳ ಭಕುತಿ ಮಾಡಿ |
ಸಾಟಿಯು ತನಗಾರಿಲ್ಲೆನಿಸಿ |
ನಾಟಕ ಸ್ತ್ರೀಯಂತೆ ಬಯಲಡಂಭವ ತೋರಿ |
ಊಟದ ಮಾರ್ಗದ ಜ್ಞಾನವಿದಲ್ಲದೆ || ೩ ||

ಶಿಷ್ಯರು—ಏನು, ಯತಿಗಳನ್ನು ದೂಷಿಸುತ್ತೀಯೆ ? ತಲೆಗಿಲೆ ತಿರುಗುತ್ತದೆಯೋ ?

(ಶಿಷ್ಯರು ಪುರಂದರ ದಾಸರನ್ನು ಹೊಡೆಯುವುದಕ್ಕೆ ಪ್ರಯತ್ನಿಸುವರು. ಅಷ್ಟರಲ್ಲಿಯೇ, ಗೋಡೆಯ ಹಿಂದೆ ನೋಡುತ್ತಿದ್ದು ಹೊರಟುಹೋಗಿದ್ದ ಜನಗಳು ಪ್ರವೇಶಿಸಿ ದಾಸರಿಗೆ ನಮಸ್ಕರಿಸುವರು)

ಪು—ಅಯ್ಯಾ, ನೀವುಗಳು ಯಾರು ? ಇದೇನು ಇಷ್ಟು ಹಠಾತ್ತಾಗಿ ಬಂದಿರುವಿರಿ ?

ಜನಗಳು—ಸ್ವಾಮಿ, ತಾವು ಕೃಷ್ಣಭಟ್ಟ, ಗೋಪಿ, ಇವರನ್ನು ಕುರಿತು ನುಡಿದ ನುಡಿಗಳು ಯಥಾರ್ಥವೆಂದು ನಾವು ಪ್ರತ್ಯಕ್ಷವಾಗಿ ನೋಡಿದೆವು. ತಾವು ನಿಜವಾಗಿಯೂ ಅಪರೋಕ್ಷಜ್ಞಾನಿಗಳು. ತಮ್ಮ ಅನುಗ್ರಹಕ್ಕೆ ಪಾತ್ರರಾಗಲು ಬಂದಿರುವೆವು.

(ಯತಿಯ ಶಿಷ್ಯರುಗಳು ಹಿಂದಕ್ಕೆ ನಿಲ್ಲುವರು. ಗೋಪಿಯು ತತ್‌ಕ್ಷಣ ಬಂದು ದಾಸರ ಪಾದಗಳಿಗೆ ಬಿದ್ದು)

ಗೋ—ಈಗ ಇವರುಗಳು ಹೇಳಿದಂತೆ ತಾವು ಅಪರೋಕ್ಷಜ್ಞಾನಿಗಳು. ಯತಿಯ ವೇಷದಲ್ಲಿರುವ ಈ ನೀಚನು ಮನಸ್ಸಿನಲ್ಲಿ ಪೂಜೆ ಮಾಡುತ್ತಿರುವ ಮೂರ್ತಿಯೆಂದರೆ ನಾನು—ಪೂಜ್ಯರೇ, ನಾನು ಪಾಪದ ಗಣಿಯು. ಯಾವ ತೀರ್ಥದಲ್ಲಾದರೂ ಮಿಂದು ನನ್ನ ಪಾಪಗಳನ್ನು ಕಳೆದುಕೊಳ್ಳಬೇಕೆಂದಿರುವೆನು.

ಪುರಂ—

ರಾಗ ಖರಹರಪ್ರಿಯ

ಚರ್ಮವ ತೊಳೆದರೆ ಕರ್ಮವು ಪೋಪುದೆ |
ಮರ್ಮವ ತಿಳಿಯದೆ ಭಿಕನಾಶಿ |
ಬೊಮ್ಮನಯ್ಯ ಪುರಂದರ ವಿಠಲನ ಪಾಡಿ |
ನಿರ್ಮಲದಿಂ ಬಾಳೆ ಭಿಕನಾಶಿ ||

(ಸನ್ಯಾಸಿಯೂ ಸಂಸ್ಕೃತ ಪಾಂಡಿತ್ಯವಿಲ್ಲದಿದ್ದವನೂ ಶಿಷ್ಯರೂ ಎಲ್ಲರೂ ನಮಸ್ಕರಿಸಿ)

ಎಲ್ಲರೂ—ನಾವೆಲ್ಲರೂ ಉದ್ಧಾರವಾಗುವ ಮಾರ್ಗವನ್ನು ಬೋಧಿಸಬೇಕೆಂದು ಬೇಡುವೆವು.

ಪುರಂ—ಅಯ್ಯಾ, ಕೇಳಿ—

ರಾಗ—ಬೇಹಾಗ್—ಆದಿತಾಳ

ಕಲಿಯುಗದೊಳು ಹರಿನಾಮವ ನೆನೆದರೆ |
ಕುಲಕೋಟಿಗಳುದ್ಧರಿಸುವುದು || ಪ ||
ಸುಲಭದ ಮುಕ್ತಿಗೆ ಸುಲಭನೆಂದೆನಿಸುವ |
ಜಲರುಹನಾಭನ ನೆನೆಮನವೆ || ಅ ||
ಜಪವೊಂದರಿಯೆನು ತಪವೊಂದರಿಯೆನು |
ಉಪದೇಶವಿಲ್ಲೆಂದೆನಬೇಡ ||
ಅಪಾರ ಮಹಿಮ ಶ್ರೀ ಪುರಂದರ ವಿಠಲನ |
ಉಪಾಯದಿಂದಲಿ ನೆನೆಮನವೆ ||

(ತೆರೆಯು ಬೀಳುವುದು)



## ಏಳನೆಯ ನೋಟ

(ಒಂದು ಬೀದಿ—ಒಬ್ಬ ಕುಳವಾಡಿಯ ಪ್ರವೇಶ)

ಕುಳ—ನಮ್ಮೂರಾಗೆ ಎಲ್ಲವ್ರೂ ಏಕನಾತವ್ರೂ ದಿನಾಗಾ ಕುರೀ, ಕೋಣ ತಲೆ ವೊಡೆದು ಬಲೀ ಕೊಡ್ತಾ ಇದ್ವಿ. ಒಬ್ಬ ಸಾಮ್ಯೇರು ಬಂದಿದ್ರು. ಎಂತಾ ಮಾನುಬಾವ ರಪ್ಪಾ! ಅವರ್ನೆಲ್ಲಾರೂ 'ದಾಸರೂ' 'ದಾಸರೂ' ಅಂತ ಕರೀತಾ ಇದ್ರು. ಮಾರಾಯರು ನಮ್ಮೆಲ್ಲಾರ್ಗೂ ಬುದ್ಧೀ ಏಳಿದ್ರು—ಕುರೀ, ಕೋಣ, ಕೋಳಿ ಇವಕ್ಕೆಲ್ಲಾ ನಮ್ಮಾಂಗೇ ಜೀವಾ ಇಲ್ವಾ? ನಮ್ಮನ್ನು ಉಟ್ಸಿದ್ಯಾವ್ರೇ ಅಲ್ವ ಅವುಗಳ್ನೂ ಉಟ್ಸಿದ್ದು? ಎಂಗಾರೂ ಆಗ್ಲಿ—ಈಗ್ಗೆ ನಮ್ಮೂರಾಗೆ-ಪರಶ್ಯಾಗೆ ಕೂಡಾ-ರಾಶಿ ರಾಶಿ ಕೋಣ್ನ, ಕುರಿ ಬೀಳಾದು ತಪ್ಪಿತು. ದಾಸರು ದ್ಯಾವರ ಪದಾ ಏಳ್ಕೊಟ್ಟವ್ರೆ. ಆ ಪದಾ ಅತ್ತಿವ್ನೀ—

ರಾಗ—ನಾದನಾಮಕ್ರಿಯೆ—ಏಕತಾಳ

ನಾ ಡೊಂಕಾದರೆ ಏನೋ ನಿನ್ನ
ನಾಮ ಡೊಂಕೆ ವಿಠಲ ॥ ಪ ॥
ನದಿಯು ಡೊಂಕು ಆದರೇನು ।
ಉದಕ ಡೊಂಕೆ ವಿಠಲ ॥ ೧ ॥
ಕಬ್ಬು ಡೊಂಕು ಆದರೇನು ।
ಸಿಹಿ ಡೊಂಕೆ ವಿಠಲ ॥ ೨ ॥
ಆಕಳು ಡೊಂಕು ಆದರೇನು ।
ಹಾಲು ಡೊಂಕೆ ವಿಠಲ ॥ ೩ ॥
ನಾನು ಹೊಲೆಯನಾದರೆ ನಿನ್ನ ।
ನಾಮ ಹೊಲೆಯೆ ವಿಠಲ ॥ ೪ ॥

ಅಜ್ಞಾನಾದರೇನು ಕಾಯೊ |
ಸುಜ್ಞ ಪುರಂದರ ವಿಠಲ || ೫ ||

(ಕುಳವಾಡಿಯು ಹೊರಟುಹೋಗುವನು)



## ಎಂಟನೆಯ ನೋಟ

(ಅಡವಿ-ಪುರಂದರ ದಾಸರು ದೇವರ ಪ್ರಾರ್ಥನೆ ಮಾಡುತ್ತಾ ಹೋಗುತ್ತಿರುವರು)

ರಾಗ ಬೇಹಾಗ್ ಆದಿತಾಳ

ಹರಿನಾರಾಯಣ ಹರಿನಾರಾಯಣ |
ಹರಿನಾರಾಯಣ ಎನು ಮನವೆ ||
ಹರಿನಾರಾಯಣ ಹರಿನಾರಾಯಣ |
ಹರಿನಾರಾಯಣ ಎನು ಮನವೆ ||

(ಸುತ್ತಲೂ ನೋಡಿ)

ಪು—ಭಯಂಕರವಾದ ಕಾಡು. ಇಲ್ಲಿ ದುಷ್ಟಮೃಗಗಳು ವಾಸವಾಗಿರುವುವು. ಅಲ್ಲದೆ, ಮನಸ್ಸಿನಲ್ಲಿ ಏನೋ ಒಂದು ವಿಧವಾದ ಭಯವುಂಟಾಗುತ್ತಿರುವುದು. ಹಾ, ಭಯಕೃದ್ಭಯನಾಶನಾ !

ಅಪಾಯಕೋಟಿಕೋಟಿಗಳಿಗೆ ಉಪಾಯವೊಂದೆ |
ಉಪಾಯವೊಂದೆ ಹರಿಭಕ್ತರು ತೋರಿಕೊಟ್ಟ |
ಉಪಾಯವೊಂದೆ, ಪುರಂದರವಿಠಲನೆಂದು ಭೋರಿಟ್ಟುಕರೆವ |
ಉಪಾಯವೊಂದೆ, ಉಪಾಯವೊಂದೆ ||

(ಕೆಲವರು ಕಳ್ಳರು ಹಠಾತ್ತಾಗಿ ಪ್ರವೇಶಿಸಿ ದಾಸರನ್ನು ಹೊಡೆಯುವುದಕ್ಕೆ ಕತ್ತಿಗಳನ್ನೆತ್ತುವರು. ಅಷ್ಟರಲ್ಲಿಯೇ ಸೇವಕರು ಬಂದು ಅವರ ಕೈಗಳಿಂದ ಕತ್ತಿಗಳನ್ನು ಕಿತ್ತುಕೊಂಡು ಕಳ್ಳರನ್ನು ಹೊಡೆಯಲೆತ್ನಿಸುವರು)

ಪು (**ಸೇವಕರ ಕಡೆಗೆ ತಿರುಗಿ**)—ನೀವು ಅವರನ್ನು ಹೊಡೆಯಬೇಡಿ.

(ಕಳ್ಳರು ದಾಸರ ಪಾದಗಳಿಗೆ ಬಿದ್ದು ನಮಸ್ಕರಿಸುವರು)

ಪು (**ಕಳ್ಳರನ್ನು ನೋಡಿ**)—ಅಯ್ಯಾ, ನೀವು ಯಾರು? ಬಡದಾಸನಾದ ನನ್ನ ಪ್ರಾಣವನ್ನು ತೆಗೆಯಲು ಏಕೆ ಯತ್ನಿಸಿದಿರಿ?

೧ನೇ ಕಳ್ಳ—ಮಹಾನುಭಾವರೇ, ನಾವು ತ್ರಿವಿಕ್ರಮಪಂಡಿತರಿಂದ ಈ ಕಾರ್ಯವನ್ನು ಮಾಡಲು ಕಳುಹಿಸಲ್ಪಟ್ಟೆವು.

೨ನೇ ಕಳ್ಳ—ಸ್ವಾಮಿ, ವಿರೂಪಾಕ್ಷಶಾಸ್ತ್ರಿಗಳೂ ಪುರಾಣದ ರಾಮಾಚಾರ್ಯರೂ ಹೇಗಾದರೂ ನಿಮ್ಮ ಪ್ರಾಣವನ್ನು ತೆಗೆಯಬೇಕೆಂದು ನಮ್ಮನ್ನು ಕಳುಹಿಸಿದ್ದಾರೆ.

ಪು—ವಿಠಲ, ಯಾರೇನು ವಿಪತ್ತನ್ನುಂಟುಮಾಡಬೇಕೆಂದರೂ, ನೀನು ಕ್ಷಣಮಾತ್ರದಲ್ಲಿ ಪರಿಹರಿಸುವೆ.

೧ನೇ ಸೇವಕ—ಪ್ರಭೋ, ನಾವು ತಮ್ಮ ದರ್ಶನಕ್ಕೋಸ್ಕರವೇ ಹುಡುಕಿ ಎಲ್ಲೆಲ್ಲಿಯೂ ಸಿಕ್ಕದೆ, ಈದಿನ ಇಂತಹ ಸಮಯದಲ್ಲಿ ತಾವು ಸಿಕ್ಕಿ, ತಮ್ಮ ಸೇವೆ ಮಾಡಲು ನಮಗೆ ಅವಕಾಶ ಸಿಕ್ಕಿತಲ್ಲಾ; ನಾವೇ ಧನ್ಯರು!

ಪು—ಅಯ್ಯಾ, ನೀವು ಬಹಳ ಉಪಕಾರ ಮಾಡಿರುವಿರಿ (**ಕಳ್ಳರ ಕಡೆಗೆ ತಿರುಗಿ**) ನೀವು ನೀಚಕಾರ್ಯಗಳಿಗೆ ತೊಡಗದೆ, ಸನ್ಮಾರ್ಗದಲ್ಲಿದ್ದು ಹರಿಯ ಭಜನೆಯನ್ನು ಮಾಡಿರಿ.

ರಾಗ ಕಾನಡ

ನಾನಿನ್ನ ಧ್ಯಾನದೊಳಿರಲು ಮಿಕ್ಕ
ಹೀನಮಾನವರೇನು ಮಾಡಬಲ್ಲರೊ ರಂಗ ‖ ಪ ‖

ಮಚ್ಚರಿಸುವರೆಲ್ಲ ಕೂಡಿ ಮಾಡುವುದೇನು |
ಅಚ್ಯುತ ನಿನದೊಂದು ದಯೆಯಿರಲು ‖

ವಾತ್ಸಲ್ಯ ಬಿಡದಿರು ನಿನ್ನ ನಂಬಿದೆ ದೇವ |
ಕಿಚ್ಚಿಗೆ ಇರುವೆ ಮುತ್ತುವುದೆ ಕೇಳೆಲೊ ರಂಗ ‖

(ಹೀಗೆಂದು ಹಾಡಿಕೊಂಡು ಹೊರಟುಹೋಗುವರು)

ಘರದೆಯು ಬೀಳುವುದು.

**ಎರಡನೆಯ ಅಂಕವು ಮುಗಿದುದು**



# ಮೂರನೆಯ ಅಂಕ

## ಮೊದಲನೆಯ ನೋಟ

(ದೇವದಾಸಿಯಾದ ರಾಧೆಯ ಶೃಂಗಾರಗೃಹ. ಬಹು ಚೆನ್ನಾಗಿ ಅಲಂಕರಿಸಲ್ಪಟ್ಟಿರುವುದು. ಸುತ್ತಲೂ ಶ್ರೀ ಕೃಷ್ಣನ ವಿವಿಧ ಲೀಲೆಗಳನ್ನು ತೋರಿಸುವ ಪಟಗಳಿರುವುವು. ರಾಧೆಯು ಹಾಡುವಳು)

ರಾಧೆ—

ರಾಗ ಹಿಂದೂಸ್ಥಾನಿ ಕಾಪಿ

ಜಗದುದ್ಧಾರನಾಡಿಸಿದಳೆಶೋದೆ ‖ ಪ ‖
ಜಗದುದ್ಧಾರನ ಮಗನೆಂದು ತಿಳಿದು |
ಬಗೆ ಬಗೆ ಆಟಗಳಾಡಿಸಿದಳೆಶೋದೆ ‖ ಅನು ‖
ನಿಗಮಕೆ ಸಿಲುಕದ ಅಗಣಿತ ಮಹಿಮನ |
ಮಗುಗಳ ಮಾಣಿಕ್ಯವಾಡಿಸಿದಳೆಶೋದೆ ‖ ೧ ‖
ಅಣೋರಣೀಯಾನ್ ಮಹತೋಮಹೀಯಾನ್ |
ಅಪ್ರಮೇಯನಾಡಿಸಿದಳೆಶೋದೆ ‖ ೨ ‖
ಪರಮಪುರುಷನಾದ ಪರ ವಾಸುದೇವನ |
ಪುರಂದರ ವಿಠಲನಾಡಿಸಿದಳೆಶೋದೆ ‖ ೩ ‖

ಅಹಾ, ಯಶೋದೆಯು ಇನ್ನೆಂತಹ ಪುಣ್ಯವಂತಳೋ! ತನ್ನ ಕುಕ್ಷಿಯಲ್ಲಿ ಹದಿನಾಲ್ಕು ಲೋಕಗಳನ್ನೂ ರಕ್ಷಿಸಿಕೊಂಡಿರುವ ಪರಮಾತ್ಮನು ಅಂಜಿದನೆಂದು ರಕ್ಷೆಯಿಡುವ ಪುಣ್ಯವನ್ನು ಆಕೆಯು ಎಲ್ಲಿ ಪಡೆದಳೋ! ಬಲಿಯು ದಾನವನ್ನು ಕೊಟ್ಟ ಕಾಲದಲ್ಲಿ ಅದ್ಭುತವಾದ ತ್ರಿವಿಕ್ರಮಾವತಾರವನ್ನು

ತಾಳಿದ ದೇವನನ್ನು ತನ್ನ ತೊಡೆಯಮೇಲಿಟ್ಟುಕೊಂಡು ತಲೆಯನ್ನು ನೇವರಿಸುತ್ತಾ ಮುದ್ದಿಸುವ ಪುಣ್ಯವನ್ನೆಲ್ಲಿ ಪಡೆದಳೋ ! ಮಂದರಧರನನ್ನು ಆನಂದದಿಂದ ಬರದಪ್ಪುವ ಪುಣ್ಯವನ್ನು ತಾನೆಲ್ಲಿ ಪಡೆದಳೋ !

ಯಶೋದೆ! ಜಗದುದರನು ನಿನ್ನ ಮಗನೇ ? ವಿಚಿತ್ರ ಮಹಿಮನಾದ ಪರಮಾತ್ಮನ ಲೀಲೆಗಳಿಗೆ ಮೇರೆಯುಂಟೇ ? ಕೃಷ್ಣಾ, ನಿನ್ನೊಡನೆ ಗೋಕುಲದಲ್ಲಿ ಬಹುವಿಧ ಲೀಲೆಗಳನ್ನನುಭವಿಸಿದ ಗೋಪಿಕಾಸ್ತ್ರೀಯರು ಎಷ್ಟು ಪುಣ್ಯಜೀವಿಗಳೋ ! ಗೋಪಿಕಾಸ್ತ್ರೀಯರು ಕೃಷ್ಣನನ್ನು ಬಿಟ್ಟೊಂದರಘಳಿಗೆಯೂ ಜೀವಿಸಲಾರರು !

ಉದಯ ರಾಗ

ಗೋಪಿಯರು ಕೃಷ್ಣನ ವಿರಹಪ್ರಳಾಪದಿಂದ |
ಮಧುರಾಪುರದ ಬಿಲ್ಲ ಹಬ್ಬವ ಜರದರು || ಪ ||
ಅಕ್ರೂರನೆಂಬ ಕಲುಹೃದಯ ಬಂದು ನಮ್ಮನ |
ತಿಕ್ರಮಿಸಿ ಕೃಷ್ಣನ ಪುರಕೆ ನಡೆಸಿದ ||
ವಕ್ರವಾದನು ನಮ್ಮ ಕ್ರೀಡೆಗಳಿಗೆ ಅಕಟ |
ಈ ಕ್ರೂರಗಕ್ರೂರ ಪೆಸರೇತಕೆನುತ || ೧ ||
ರಥವ ನಿಲ್ಲಿಸದೆ ಮೋಸಹೋದೆವಲ್ಲ ಮನೋ |
ರಥಸಿದ್ಧಿ ಕೊನೆಸಾಗಲಿಲ್ಲ ||
ರತಿಪತಿಯ ಪಿತನಗಲಿ ಕೆಟ್ಟೆವಲ್ಲ ಇನ್ನು |
ಗತಿಯಾರು ನಮ್ಮ ಸಂತೈಪರಾರೆನುತ || ೨ ||
ಯುಗವೊಂದು ನಿಮಿಷವಾಗಿದ್ದೆವಲ್ಲ ಅವನ |
ನಗೆನೋಟ ಕೂಟಬೇಟಗಳಿಂದ ||
ಅಗಲಿ ಪೋದನು ಕೃಷ್ಣನು ಇಂದು ನಮಗೆ ನಿಮಿಷ |
ಯುಗವಾಗಿ ತೋರುತಿನ್ನೇನುಪಾಯವೆನುತ || ೩ ||

ಯಾಕೆಮ್ಮ ಪುಟ್ಟಿಸಿದೆ ವಿಧಿಯೇ ನಮಗಿನ್ನೇಕೆ |
ಶ್ರೀಕೃಷ್ಣನಿಲ್ಲದ ಸಡಗರ, ಭ್ರಮರ ||
ಕೋಕಿಲಾರವದಿ ಕೋಳುಹೋದೆವಲ್ಲ |
ಕಾಕುಮಾಡಿತು ಕಂದರ್ಪನಸ್ತ್ರವು ಎನುತ ||೪||

ಅವನ ಲಾವಣ್ಯಮೂರುತಿ ನೋಡಿ ಕಂಗಳು |
ಅವನ ಜಾಣವಿಯ ನುಡಿಗೇಳಿ ಕಿವಿಯು |
ಅವನ ಅಧರಾಮೃತವ ಸವಿಸವಿದು ಜಿಹ್ವೆ |
ದಿವಸಗಳ ಕಳೆಯಲಿನ್ನೆಂತುಪಾಯವೆನುತ ||೫||

ಆಹಾ, ಗೋಪಿಕಾ ಸ್ತ್ರೀಯರು ಎಷ್ಟು ಧನ್ಯರೋ ! ನನಗಾದರೂ ಆ ಪುಣ್ಯವುಂಟೇ ? ಇದರೂ ಚಿಂತೆಯಿಲ್ಲ. ವಿಠಲನ ಸೇವೆಯು ನನಗೆ ದೊರಕಿರುವುದು ನನ್ನ ಸುಕೃತ. ವಿಠಲನೇ ನನಗೆ ವಿಟಪುರುಷನು. ಆತನನ್ನು ಕಾಣದೆ ಒಂದರಘುಳಿಗೆಯೂ ಜೀವಿಸಲಾರೆನು.

ರಾಗ ಸುರುಟಿ ಆದಿತಾಳ

ಕಂತು ಪಿತನ ಕಾಣದೆ ಈ ಪ್ರಾಣವು -
ಎಂತು ನಿಲ್ಲುವುದಮ್ಮ |
ಅಂತರಂಗದ ಕಾಮ ಶಾಂತವಾಡದೆ ಪೋದ |
ಕಾಂತನ ಕಾಣದೆ ಭ್ರಾಂತಳಾಗಿಹೆನು ||೧||

ಜಾರೆ ನಾನಾದಳೆಂದು ನಮ್ಮವರೆಲ್ಲ -
ಸಾರಿ ಕೈಬಿಟ್ಟರಮ್ಮ |
ವಾರಿಜಾಕ್ಷನು ಬರದೂರಿಗೆ ಗುರಿಮಾಡಿ |
ದಾರಿತಾರದೆ ಪೋಗಲಾರ ನೇರುವೆ ನಮ್ಮ ||೨||

ಬೆರೆವುದಿನ್ನೆಂದು ನಾನು, ಶ್ರೀಹರಿಸಂಗ -
ದೊರೆವುದಿನ್ನೆಂದಿಗಮ್ಮ |

ಕರುಣಾಕರ ನಮ್ಮ ಪುರಂದರ ವಿಠಲನು |
ಕರೆದುಕೊಳ್ಳದೆ ನನ್ನ ತೊರೆದು ಪೋಗುವನೆ ||೩||

ವಿಠಲ ! ವಿಠಲ !

(ಪರಮಾತ್ಮನು ಪುರಂದರದಾಸರ ವೇಷದಲ್ಲಿ ಪ್ರವೇಶಮಾಡುವನು. ರಾಧೆಯು ಆತನನ್ನು ಆಲಂಗಿಸಿಕೊಳ್ಳುವಳು.)

ರಾಧೆ—ಹಾ, ವಿಠಲ! ನಿನ್ನ ಅಭಿಮಾನಕ್ಕೆ ಸಮನುಂಟೆ? ನಿನ್ನ ಪ್ರೇಮವೇ ಪ್ರೇಮ !

ವಿಠಲ—ರಾಧೇ, ಪ್ರೇಮ ? ಏನು ಪ್ರೇಮ ?

ರಾ—(ವಿಠಲ) "ಎಲ್ಲಿ ಬಯಸಿದರಲ್ಲಿ ನಾನಿರುವೆ" ಎಂದು ಗೋಪಿಕಾ ಸ್ತ್ರೀಯರಿಗೆ ಮಾಡಿದ ವಾಗ್ದಾನವನ್ನು ಈಗ ನನಗೇ ಸಲ್ಲಿಸಿಕೊಟ್ಟೆ.

ವಿ—ಅದೇನು ? ಹೇಳು.

ರಾ—ನಿನ್ನ ಅಂಗಸಂಗವನ್ನು ಬಯಸಿ ನಿನ್ನನ್ನೇ ಧ್ಯಾನಮಾಡುತ್ತಿದ್ದೆನು. ಆ ಹೊತ್ತಿಗೆ ಸರಿಯಾಗಿ ನೀನು ನನಗೆ ದರ್ಶನವನ್ನಿತ್ತೆ.

ವಿ—ರಾಧೆ ! ಯಾರ ಅಂಗಸಂಗವನ್ನು ?

ರಾ—ಏಕೆ ! ನಿನ್ನ ಅಂಗಸಂಗವನ್ನು -

ವಿ—ನಾನು ಯಾರು ?

ರಾ—ವಿಠಲಾವತಾರಿಯಾದ ಗೋಪೀಲೋಲ ಶ್ರೀ ಕೃಷ್ಣನು.

ವಿ—ರಾಧೆ, ನಾನು ಯಾರೋ ತಲೆಯೆತ್ತಿ ನೋಡು (ರಾಧೆಯು ತಲೆಯೆತ್ತಿ ನೋಡಿ, ಆಶ್ಚರ್ಯದಿಂದ ದಿಗ್ಭ್ರಮೆಯಾಗಿ ದೂರಹೋಗಿ ನಿಂತುಕೊಳ್ಳುವಳು)

ರಾ—ಮಹಾನುಭಾವರಾದ ಪುರಂದರದಾಸರೇ ! ನನ್ನ ಅಪರಾಧವನ್ನು ದಯವಿಟ್ಟು ಮನ್ನಿಸಬೇಕು.

ವಿ—ರಾಧೆ, ನಿನ್ನ ಅಪರಾಧವೇನು ?

ರಾ—ತಾವು ಯಾರೆಂದು ಮುಂಚೆ ನೋಡದೆ ನಾನು ಏನೇನೋ ಮಾತನಾಡಿ ಬಿಟ್ಟೆ. ಕೇವಲ ಮನೋಭಾವದ ಉತ್ಸುಕತೆಯಿಂದ ನಾನಾಡಿದ ನುಡಿಗಳಿಗೋಸ್ಕರ ದಯವಿಟ್ಟು ಕ್ಷಮಿಸಲು ಪ್ರಾರ್ಥಿಸುತ್ತೇನೆ. ಮಹನೀಯರಾದ ತಾವು ಕೇವಲ ಪಾಮರಳಾದ ನನ್ನ ಮನೆಗೆ ಬಂದುದರಿಂದ ನಾನು ಧನ್ಯಳಾದೆನು.

ವಿ—ರಾಧೆ, ನಾನು ಬಂದ ಉದ್ದೇಶವನ್ನು ನೆರವೇರಿಸಿಕೊಡುವೆಯಾ ?

ರಾ—ಪೂಜ್ಯರೇ, ತಮ್ಮ ಅಪ್ಪಣೆಯನ್ನು ಎಳ್ಳಷ್ಟೂ ಮೀರೆನು.

ವಿ—ನಿಜವಾಗಿಯೂ ನನ್ನ ಇಷ್ಟಾರ್ಥವನ್ನು ಕೈಗೂಡುವಂತೆ ಮಾಡುವೆಯಾ ?

ರಾ—ಅಲ್ಪಳಾದ ನಾನು ಏನು ತಾನೇ ಕೊಟ್ಟೇನು ?

ವಿ—ನನಗೆ ಬೇಕಾದುದನ್ನು ಕೊಡಲು ನೀನಲ್ಲದೆ ಇನ್ನಾರೂ ಶಕ್ತರಲ್ಲ. ಆದುದರಿಂದಲೇ ನಿನ್ನ ಬಳಿಗೆ ಬಂದೆನು.

ರಾ—ಯಾರಲ್ಲಿಯೂ ಇಲ್ಲದ ವಸ್ತುವು ನನ್ನಲ್ಲೇನಿರುವುದು ?

ವಿ—ರಾಧೇ, ನಿನ್ನ ನಿರುಪಮ ಸೌಂದರ್ಯವು ಎಂತಹವರಿಗೂ ಕಾಮವಿಕಾರವನ್ನುಂಟುಮಾಡುವುದು.

ರಾ—ಪೂಜ್ಯರೇ, ನಿಮ್ಮ ನುಡಿಗಳು ನನಗೆ ಬಹಳ ಭಯವನ್ನು ಹುಟ್ಟಿಸುತ್ತಿರುವುವು.

ವಿ—ರಾಧೇ, ಈ ದಿನ ನಾನು ನಿನ್ನಲ್ಲಿ ಮೋಹಪರವಶನಾಗಿ ಬಂದಿರುವೆನು.

(ರಾಧೆಯು ಭಯದಿಂದ ಸುಮ್ಮನಿರುವಳು)

ವಿ—ಏಕೆ ಸುಮ್ಮನಿರುವೆ ?

ರಾ—ಕೇವಲ ವಿರಕ್ತರಾದ ತಾವು ಈರೀತಿ ಹೇಳುವುದನ್ನು ನೋಡಿದರೆ ಆಶ್ಚರ್ಯವಾಗಿದೆ.

ವಿ—ನಿನ್ನನ್ನು ನೋಡಿದಾಗಲಿಂದ ನನ್ನ ವೈರಾಗ್ಯವೆಲ್ಲಾ ಮಾಯವಾಯಿತು.

ರಾ—ತಾವು ನನ್ನನ್ನು ಪರೀಕ್ಷೆ ಮಾಡುತ್ತಿರುವಂತೆ ಕಾಣುತ್ತದೆ.

ವಿ—ರಾಧೆ, ನಿಜವಾಗಿಯೂ ಪರೀಕ್ಷೆಯಲ್ಲ. ನಿನ್ನ ಮೋಹ ಪಾಶಕ್ಕೆ ಸಿಕ್ಕಿ ಎಳೆಯಲ್ಪಟ್ಟು ಇಲ್ಲಿಗೆ ಬಂದಿರುವೆನು.

ರಾ—ದಾಸಶ್ರೇಷ್ಠರೇ, ತಮ್ಮೆದುರಿಗೆ ನುಡಿಯಲು ನನಗೆ ಅಂಜಿಕೆಯಾಗುವುದು. ಕೇವಲ ಅಜ್ಞಾನಿಯಾದ ನನ್ನನ್ನು ತಾವು ಈರೀತಿ ಪರೀಕ್ಷೆಮಾಡುವುದು ನ್ಯಾಯವೇ ?

ವಿ—ರಾಧೇ, ಇದೀಗ ಚೆನ್ನಾಯಿತು. ನೀನೇ ನನ್ನನ್ನು ಪರೀಕ್ಷೆ ಮಾಡುತ್ತಿರುವೆ. ನಿನ್ನಲ್ಲಿನ ವ್ಯಾಮೋಹವನ್ನಿಟ್ಟು ಇಲ್ಲಿಗೆ ಬಂದೆನು.

ರಾ—ಮಹನೀಯರೇ, ಐಹಿಕಭೋಗವನ್ನೆಲ್ಲಾ ತುಚ್ಛವಾಗೆಣಿಸಿರುವ ನೀವು ಹೀಗೆ ಹೇಳಿದರೆ ಯಾರು ತಾನೇ ನಂಬುವರು?

ವಿ (ಸ್ವಲ್ಪ ಕೋಪವನ್ನು ನಟಿಸುತ್ತ)—ಎಲೇ, ರಾಧೇ, ನಾನು ಕೇವಲ ಬಡದಾಸನೆಂದು ಅಪಹಾಸ್ಯ ಮಾಡುತ್ತೀಯೋ ? ನಿನಗೆ ನಗನಾಣ್ಯವನ್ನು ಕೊಡುವುದರಲ್ಲಿ ಇತರ ವಿಟಪುರುಷರಿಗಿಂತಲೂ ನಾನೇನೂ ಕಡಮೆಯೆಂದು ತಿಳಿಯಬೇಡ. ಆ ರೀತಿಯಾದ ಆಶೆಯು ನಿನಗಿದ್ದರೆ ನಾನು ತೃಪ್ತಿಪಡಿಸುವೆನು.

ರಾ—ಪೂಜ್ಯರೇ, ನಾನು ಇದುವರೆಗೂ ಯಾವ ಪುರುಷನನ್ನೇ ಆಗಲಿ ಕಾಮಭಾವದಿಂದ ಕಣ್ಣೆತ್ತಿ ಸಹ ನೋಡಿಲ್ಲ. ತ್ರಿಕರಣಶುದ್ಧಿಯಾಗಿಯೂ ತಮ್ಮಲ್ಲಿ ಕೇವಲ ಗುರುಭಾವವನ್ನಿಟ್ಟಿರುವೆನು.

ವಿ—ಹಾಗಿದ್ದರೆ, ನಾನು ಬಂದಾಗ ನೀನು ನಡೆಯಿಸಿದ ಕಾಮವಿಕಾರದ ಚರ್ಯೆಗಳೇನು ? ಸುಳ್ಳು ಹೇಳಬೇಡ.

ರಾ—ಮುಹನೀಯರೇ, ತಾವು ಬರದಾಗ ಶ್ರೀಭಾಗವತ ಪುರಾ ಣದ ಕಥೆಯನ್ನು ಸ್ಮರಿಸಿಕೊಂಡು ಜಗನ್ಮೋಹಕ ಸ್ವರೂ ಪನಾದ ವಿಠಲನನ್ನೇ ಧ್ಯಾನಿಸುತ್ತಾ ಇದ್ದೆನು.

ವಿ—ರಾಧೆ! ಪ್ರಿಯ ರಾಧೇ! ನೀನೇನಾದರೂ ಹೇಳು. ನಿನ್ನ ಸೌಂದರ್ಯದಿಂದ ನನ್ನ ಮನಸ್ಸು ಸೆಳೆಯಲ್ಪಟ್ಟಿರುವುದು. ಮೋಹನಾಂಗೀ, ಇತ್ತ ಬಾ.

(ಎಂದು ಕೈ ಹಿಡಿಯುವನು. ರಾಧೆಯು ಕೊಸರಿಕೊಂಡು ಹೋಗುವುದಕ್ಕೆ ಪ್ರಯತ್ನಿಸುವಳು. ಆದರೂ ವಿಠಲನು ಕೈ ಯನ್ನು ಭದ್ರವಾಗಿ ಹಿಡಿದುಕೊಂಡು ಅವಳ ಕೈಗೆ ಭಂಗಾರದ ಬಳೆಯನ್ನು ತೊಡಿಸುತ್ತಾ)

ಕಡು ಸುಂದರೀ! ನಿನ್ನ ಕರಪಲ್ಲವಕ್ಕೆ ಈ ಸುವರ್ಣದ ಬಳೆ ಯನ್ನು ತೊಡಿಸುವೆನು. ನಾನು ಈಗ ಹೊರಡುತ್ತೇನೆ. ನಾಳೆಯ ರಾತ್ರಿ ಪುನಃ ಇಲ್ಲಿಗೆ ಬರುವೆನು. ಎಲ್ಲವನ್ನೂ ಸಿದ್ಧಪಡಿಸಿಕೊಂಡಿರು. ಕೇವಲ ಬಡದಾಸನೆಂದು ಅಲ ಕ್ಷ್ಯಮಾಡಬೇಡ. ರಾಧೇ, ನಾನು ಹೊರಡಲೇ?

(ಎಂದು ಹಿಂದಕ್ಕೆ ತಿರುಗಿಕೊಂಡು ನೋಡುತ್ತ ನೋಡು ತ್ತ ಹೊರಟುಹೋಗುವನು)

ರಾ—ಹಾ, ಸರ್ವಾಂತರ್ಯಾಮಿಯಾದ ಪರಮಾತ್ಮಾ! ನಾನು ಕೇವಲ ಅಬಲೆಯು. ನನಗೇನೂ ತಿಳಿಯದು. ಈಗ ನಡೆದ ಸಂಗತಿಯು ನನಗೆ ದಿಕ್ಕುತೋಚದಂತೆ ಮಾಡಿದೆ. ದಾಸವರ್ಯರು ನನ್ನನ್ನು ಪರೀಕ್ಷೆ ಮಾಡುವುದಕ್ಕೇ ಬಂದಿದ್ದ ರೆಂದು ನಾನೇನೋ ನಂಬುತ್ತೇನೆ. ವಿಠಲ, ನಿನ್ನ ಲೀಲೆ ಯನ್ನು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ. ಕಷ್ಟ ಪರಂಪರೆಗಳನ್ನು ತಂದಿಡುವವನೂ ನೀನೇ. ಅವುಗಳನ್ನೆ

ಲ್ಲಾ ಪರಿಹಾರ ಮಾಡುವವನೂ ನೀನೇ. ವಿಠಲಾ! ರಕ್ಷಿಸು! ರಕ್ಷಿಸು!

(ಪರದೆಯು ಬೀಳುವುದು)



## ಎ ರ ಡ ನೆ ಯ ನೋ ಟ

(ಒಂದು ಬೀದಿ - ವಿರೂಪಾಕ್ಷಶಾಸ್ತ್ರಿಗಳೂ, ರಾಮಾಚಾರ್ಯರೂ ಪ್ರವೇಶಿಸುವರು)

ವಿರೂ—ರಾಮಾಚಾರ್ರ್ರೇ, ನೋಡಿದಿರಾ? ನಮ್ಮ ಪ್ರಯತ್ನವೆಲ್ಲಾ ನೀರಿನಲ್ಲಿ ಹೋಮಮಾಡಿದ ಹಾಗಾಯಿತು.

ರಾಮಾ—ಶಾಸ್ತ್ರಿಗಳೇ, ನಾವು ಮಾಡಿದುದು ಏನೋ ಹೋಗಿ ಏನೋ ಆಯಿತು. ದಾಸ, ಮೊದಲಿಗಿಂತ ಇನ್ನೂ ಹೆಚ್ಚಾಗಿ ಮೆರೆಯುತ್ತಾ ಇದ್ದಾನೆ.

ವಿರೂ—ಅದಿರಲಿ, ರಾಮಾಚಾರ್ರ್ರೇ, ನಮ್ಮ ಗುಟ್ಟು ಈಗ ರಟ್ಟಾಗಿ, ನಾವು ಈಗ ತಲೆಯನ್ನೆತ್ತಿಕೊಂಡು ತಿರುಗುವ ಹಾಗೆಯೇ ಇಲ್ಲ. ಇನ್ನೇನು ಗತಿ?

(ತ್ರಿವಿಕ್ರಮ ಪಂಡಿತರ ಪ್ರವೇಶ)

ವಿರೂ—ಪಂಡಿತರೇ, ಇದೇಕೆ ಇಷ್ಟು ಕಾಲವಿಳಂಬ?

ತ್ರಿ—ಸಾಕಪ್ಪಾ, ಒಳ್ಳೆಯ ಸಮಯದಲ್ಲಿಯೇ ಕೈಕೊಡುವಿರಲ್ಲಾ!

ರಾ—ಇದೇನು ಸ್ವಾಮಿ?

ತ್ರಿ—ಏನೂ ಇಲ್ಲ. ದಾಸ-ಪುರಂದರದಾಸ.

ರಾ—ಅಯ್ಯಯ್ಯೋ, ಆ ದಾಸನ ಮಾತೆತ್ತಬೇಡಿ.

ವಿ—ಆ ಹಾಳು ದಾಸನ ಸಹವಾಸ ಬೇಡ. ಕೆಣಕಿ ಆಯಿ ತಲ್ಲಾ !

ತ್ರಿ—ಏನು ಆಯಿತು ?

ರಾ—ಆಗುವುದೇನು ? ನಮ್ಮ ಪ್ರಯತ್ನ ನಿಷ್ಫಲವಾಯಿತು. ದಾಸನ ಪ್ರತಾಪ ಬೆಳೆಯಿತು.

ತ್ರಿ—ಅಯ್ಯೋ, ಹೇಡಿಗಳಿರಾ, ನೀವು ಮುಂದೆ ಹೊರಟುಬಂ ದಿರಲ್ಲಾ. ಆಗತಾನೇ ಆದಾಸ ರಾಧೆಯ ಮನೆಯಿಂದ—

ವಿರೂ—ದಾಸ ರಾಧೆಯ ಮನೆಯಿಂದ ಹೊರಟುಬಂದನೇ ?

ರಾಮಾ-ಏನು ? ದಾಸ ರಾಧೆಯ ಮನೆಯೊಳಕ್ಕೆ ಹೋಗಿದ್ದ ನೇ ? ಬೇಗ ಹೇಳಿ, ಕೇಳೋಣ.

ತ್ರಿ—ಈ ಕುತೂಹಲ ನನ್ನನ್ನು ಬಿಟ್ಟು ಬಂದಾಗ ಎಲ್ಲಿ ಹೋ ಗಿತ್ತೋ ?

ರಾ-ಅದಿರಲಿ, ಸ್ವಾಮಿ, ಹೇಳಿ.

ತ್ರಿ-ದಾಸ ರಾಧೆಯ ಮನೆಯಿಂದ ಹೊರಟುಬಂದುದನ್ನು ನಾನು ಕಣ್ಣಾರ ಕಂಡೆ.

ರಾ—ಬದುಕಿದೆವು ಸಧ್ಯಕ್ಕೆ.

ವಿ—ನೀವು ಹೇಳಿದುದು ನಿಜವೇ, ಸ್ವಾಮಿ ?

ತ್ರಿ—ಈಗ ಈ ಕಡೆಯೇ ಬರುತ್ತಾನೆ ಸುಮ್ಮನಿರಿ.

(ಪುರಂದರ ದಾಸರ ವೇಷದಲ್ಲಿರುವ ವಿಠಲನ ಪ್ರವೇಶ. ಈ ಮೂರು ಜನವೂ ಒಂದೆಡೆಗೆ ನಿಲ್ಲುವರು. ವಿಠಲನು ಮುಂ ದಕ್ಕೆ ಹೋಗುತ್ತಾ ಇರಲು ಮೂವರೂ ದೂರದಿಂದ ಹಿಂ ಬಾಲಿಸುವರು)

ರಾಮಾ (ಮೂಗನ್ನು ಮುಟ್ಟಿಕೊಳ್ಳುತ್ತಾ ಮೆಲ್ಲಗೆ)—ದಾಸ ಸು ಳಿದರೆ, ಸುಗಂಧವು ಅಸಾಧ್ಯವಾಗಿದೆಯಲ್ಲಾ !

ವಿರೂ—ದಾಸನ ಕೊರಳಲ್ಲಿ ಹೂವಿನ ಹಾರ ನೋಡಿದಿರಾ ?

ತ್ರಿ—ಸುಮ್ಮನಿರಿ. ದಾಸನನ್ನು ಬಯಲಿಗಿಡೋಣ.
(ದಾಸನು ಹೊರಟುಹೋಗುವನು. ಮೂರು ಜನವೂ ಹಿಂಬಾಲಿಸುವರು)

(ಕೆಲವು ಜನಗಳು ಭಜನೆಯನ್ನು ಮಾಡುತ್ತಾ ಪ್ರವೇಶಿಸುವರು)

ಭಜನೆಯವರು—

ರಾಗ ನಾದನಾಮಕ್ರಿಯ ಛಾಪುತಾಳ

ಗೋವಿಂದ ಸಲಹೆನ್ನನು | ಸದಾನಂದ ||ಪ||
ಗೋವಿಂದ ಸಲಹೆನ್ನ ಕುಮುದಲೋಚನ ನಿನ್ನ |
ಸೇವಕರಡಿಯ ಸೇವಕನಯ್ಯ ಗೋವಿಂದ ||ಅ||
ಸರಬೊಂಬೆಗಳ ಮಾಡಿ ಕುಣಿಸುವೆ ಗೋವಿಂದ |
ನರರ ನೋಡಿ ನೋಡಿ ನಗುತಿರ್ಪೆ ಗೋವಿಂದ |
ಅರಿವೆನೆಂಬರಿಗಂತ್ಯ ತೋರದೊ ಗೋವಿಂದ |
ಅರಿಯದಂತಖಿಳದೊಳಡಗಿರ್ಪೆ ಗೋವಿಂದ |
ಅರಿಯಾಡಂಬರಗಳಿಗಳವಡದ ಗೋವಿಂದ |
ಪರಮ ಪಾವನನೆಂಬ ಬಿರುದುಳ್ಳ ಗೋವಿಂದ |
ಪರಮ ಪುರುಷ ಪುರುಷೋತ್ತಮ ಗೋವಿಂದ |
ಪರಬ್ರಹ್ಮ ಪರಮ ಪರಾತ್ಪರ ಗೋವಿಂದ |
ಮರೆಹೊಕ್ಕ ಭಕ್ತರ ಸಲಹುವ ಗೋವಿಂದ |
ಕರಿರಾಜ ಕರೆಯಲೊದಗಿ ಬಂದೆ ಗೋವಿಂದ |
ಗರುಡಗಮನ ಗೋವಿಂದ - ಕಿನ್ನರಸಿದ್ಧ |
ಗರುಡಸನ್ನುತ ಗೋವಿಂದ - ಅಪರಿಮಿತ |
ಕರುಣಾಸಾಗರ ಗೋವಿಂದ - ಅರಿಯದಂಥ |
ಪರಮಜ್ಯೋತಿಯೆ ಗೋವಿಂದ - ಗಂಗೆಯ ಪೆತ್ತ |
ಚರಣ ನಿರ್ಮಲ ಗೋವಿಂದ - ತೆತ್ತೀಸಕೋಟಿ |

ಸುರರ ಪೊರೆವ ಗೋವಿಂದ - ಶ್ರೀ ವೈಕುಂಠ |
ಪುರದೊಳಗಿಹ ಗೋವಿಂದ - ಅಚ್ಯುತಾನಂತ |
ತಿರುಪತಿ ನೆಲೆಯಾದಿಕೇಶವ ಹರಿಯೆ ||

(ಭಜನೆ ಕೂಟದವರು ಭಜನೆಯನ್ನು ಹೇಳಿಕೊಂಡು ಮುಂದೆ ಹೋಗುವರು.)

ಘರದೆಯು ಬೀಳುವುದು

— ಮೂರನೆಯ ನೋಟ —

(ವಿಠಲನ ದೇವಸ್ಥಾನ ಬಾಗಿಲಿಗೆ ಬೀಗಹಾಕಿರುವುದು. ಪುರಂದರದಾಸರ ವೇಷದಲ್ಲಿರುವ ವಿಠಲನು ಪ್ರವೇಶಿಸುವನು. ರಾಮಾಚಾರ್ಯರೂ, ವಿರೂಪಾಕ್ಷ ಶಾಸ್ತ್ರಿಗಳೂ, ತ್ರಿವಿಕ್ರಮ ಪಂಡಿತರೂ ಹಿಂದೆ ಬರುವರು. ವಿಠಲನು ದೇವಸ್ಥಾನದ ಬಾಗಿಲಿನ ಸಮೀಪಕ್ಕೆ ಹೋಗುವನು)

ರಾಮಾ—ರಾಧೆಯ ಮಂದಿರದಲ್ಲಿ ಮೆರೆಯುವ ದಾಸನಿಗೆ ವಿಠಲನ ಮಂದಿರದಲ್ಲಿ ಏನು ಕೆಲಸ?

ವಿರೂ—ತನ್ನ ಪಾಪವನ್ನು ದೇವರಿಗೆ ಸುತ್ತುವುದಕ್ಕೆ -

ತ್ರಿ—ಅಲ್ಲ, ಸ್ವಾಮಿ, ತಾನು ಮಾಡಿದ ಪಾಪವನ್ನು ಮುಚ್ಚುವುದಕ್ಕೆ ಇವೆಲ್ಲಾ ಬೂಟಾಟಿಕೆಗಳು. ನಮ್ಮ ಹೇಡಿತನ ಸಾಕು. ದಾಸನನ್ನು ಹಿಡಿದು ಹಾಕೋಣ.

(ಎಂದು ಮುಂದಕ್ಕೆ ಹೋಗುವರು. ಸಿಡಿಲು ಬಡಿದಂತೆ ಶಬ್ದವಾಗುವುದು. ಅಪೂರ್ವ ಬೆಳಕು ಕಾಣುವುದು. ರಾಮಾಚಾರ್ಯರೂ, ವಿರೂಪಾಕ್ಷ ಶಾಸ್ತ್ರಿಗಳೂ ಕೆಳಗೆ ಬೀಳುವರು. ತ್ರಿವಿಕ್ರಮ ಪಂಡಿತನು ದಿಗ್ಭ್ರಮೆಯಾಗಿ ನೋಡುವನು. ಸ್ವಲ್ಪಹೊತ್ತಿನಮೇಲೆ, ಇಬ್ಬರೂ ಏಳುವರು.)

ರಾ—ಪಂಡಿತರೇ, ಇದೇನು ವಿಚಿತ್ರ ?

ವಿರೂ—ಪಂಡಿತರೇ, ನಡೆದ ಮಾಯವನ್ನು ನೋಡಿದಿರಾ ?

(ತ್ರಿವಿಕ್ರಮನು ಮೂಕನಂತೆ ಸುಮ್ಮನಿರುವನು)

ರಾ ಮತ್ತು ವಿರೂ—ನಮ್ಮ ಪಂಡಿತರಿಗೇನೋ ವಿಚಿತ್ರ, ಪರಿಣಾಮವಾದಂತಿದೆ.

(ತ್ರಿವಿಕ್ರಮನು ದೇವಸ್ಥಾನದ ಬಾಗಿಲಿನ ಬಳಿಗೆ ಹೋಗಿ ಕಂಡಿಯಲ್ಲಿ ನೋಡುತ್ತಾ)

ತ್ರಿ—ವಿಠಲಾ ! ಪುರಂದರದಾಸರೇ ! ಮಹಾನುಭಾವರೇ ಉದ್ಧರಿಸಿ.

ರಾ—ಇದೇನು ಪಂಡಿತರೇ ?

ತ್ರಿ—ಇಲ್ಲಿ ನೋಡಿ ಪುರಂದರದಾಸರು ಒಳಗಡೆ ಇದ್ದಾರೆ.

(ರಾಮಾಚಾರ್ಯರೂ ವಿರೂಪಾಕ್ಷ ಶಾಸ್ತ್ರಿಗಳೂ ಬಾಗಿಲಿನ ಕಿಂಡಿಯಿಂದ ನೋಡುವರು)

ವಿರೂ—ಪಸ್ರೀ, ವಿಠಲನ ವಿಗ್ರಹಮಾತ್ರಾ ಕಾಣುತ್ತಾ ಇದೆ!

(ಎಂದು ಕೆಳಕ್ಕೆ ಬಂದು ಬಿಡುವರು.)

ರಾ—ಅಲ್ಲಿ ನೋಡಿ, ಗರ್ಭಗುಡಿಯೊಳಗೆ ವಿಠಲನ ವಿಗ್ರಹವೇ ಇಲ್ಲ ಪುರಂದರದಾಸರು ಮಾತ್ರಾ ಕಾಣುತ್ತಾ ಇದ್ದಾರೆ. ಬಂದು ನೋಡಿ.

(ವಿರೂಪಾಕ್ಷ ಶಾಸ್ತ್ರಿಗಳು ಪುನಃ ಬಾಗಿಲ ಬಳಿಗೆ ಬಂದು ಒಳಗೆ ನೋಡುವರು)

ವಿರೂ—ಆಹಾ, ನೀವು ಹೇಳುವುದು ನಿಜ. ವಿಠಲನಿದ್ದ ಸ್ಥಾನವಲ್ಲ ಪುರಂದರದಾಸರು ಕಾಣುತ್ತಾ ಇದ್ದಾರೆ. ಎಷ್ಟು ತೇಜಸ್ವಿಗಳಾಗಿ ಕಾಣುತ್ತಾರೆ, ನೋಡಿ ರಾಮಾಚಾರ್ರೇ.

ರಾ-ಆಹಾ, ಶಾಸ್ತ್ರಿಗಳೇ, ವಿಠಲಮೂರ್ತಿಯು ಎಷ್ಟು ಅಂದವಾಗಿ ಕಾಣುವುದು ನೋಡಿ, ದಾಸರು ಎಲ್ಲಿ ಮಾಯವಾದರು ?

ವಿ—ಪುರಂದರದಾಸರು ಇಲ್ಲಿ ಒಳಗೇ ಇದ್ದಾರೆ. ಇದೇನು ಹೀಗೆ ಹೇಳುವಿರಿ?

ತ್ರಿ—ಆಚಾರ್ಯರೇ, ಶಾಸ್ತ್ರಿಗಳೇ, ವಿಠಲನ ಮಾಯೆಯು ಇನ್ನೆಷ್ಟು ಅದ್ಭುತವಾದುದು! ಪುರಂದರದಾಸರಿನ್ನೆಷ್ಟು ಮಹಾನುಭಾವರು! ಅವರ ರೂಪದಲ್ಲಿ ವಿಠಲನು ನಮಗೆ ದರ್ಶನವನ್ನು ಕೊಟ್ಟುದನ್ನು ನೋಡಿದರೆ, ದಾಸರಿಗೆ ಕೇಡನ್ನು ಬಯಸಿದ ನಮಗೆ ಬುದ್ಧಿಯನ್ನು ಕಲಿಸಲು ಕರುಣಾಕರನಾದ ಪರಮಾತ್ಮನು ಈ ರೀತಿ ನಮಗೆ ಅನುಗ್ರಹಮಾಡಿರುವನೆಂದು ನಾನೇನೋ ದೃಢವಾಗಿ ನಂಬುತ್ತೇನೆ.

ವಿ—ನಾವು ದಾಸರಿಗೆ ಮಾಡಿದ ಅಪಚಾರಕ್ಕಾಗಿ ನಮಗೆ ಏನು ಶಿಕ್ಷೆ ಮಾಡಿದರೂ ಸಾಲದು.

ರಾ—ಆಹಾ, ದಾಸರ ಮೇಲಿನ ಅಸೂಯೆಯಿಂದ ಅವರ ವಿಷಯದಲ್ಲಿ ನಾವು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವುಂಟೇ?

ತ್ರಿ—ಇಲ್ಲಿ ಎಷ್ಟು ಸಂಕಟಪಟ್ಟರೂ ಪ್ರಯೋಜನವಿಲ್ಲ. ದಾಸರ ಬಳಿಗೇ ಹೋಗಿ ಮರೆಹೊಕ್ಕು ಅವರಲ್ಲಿ ಮನ್ನಣೆಯನ್ನು ಬೇಡೋಣ.

(ಎಲ್ಲರೂ ಹೊರಟುಹೋಗುವರು. ಅನಂತರ ಅರ್ಚಕನು ಪ್ರವೇಶಿಸುವನು. ದೇವಸ್ಥಾನದ ಬಾಗಿಲನ್ನು ತೆಗೆದು ಒಳಗೆ ಪೂಜೆಮಾಡಿ, ಅಲಂಕಾರ ಮಾಡುತ್ತಾ, ದೇವರ ಕೈಯಲ್ಲಿದ್ದ ಒಂದು ಭಂಗಾರದ ಬಳೆಯು ಕಾಣದಿರುವುದನ್ನು ಕಂಡು)

ಅರ್ಚ-ಇದೇನು ಆಶ್ಚರ್ಯ! ಸ್ವಾಮಿಯ ಬಲಹಸ್ತಕ್ಕೆ ತೊಡಿಸಿದ್ದ ಭಂಗಾರದಬಳೆಯು ಕಾಣುವುದಿಲ್ಲ. ಎಲ್ಲಿಯೋ ಮಾಯವಾಗಿದೆ. (ಎಂದು ಸುತ್ತುಮುತ್ತಲೂ ಹುಡುಕುವನು) ಎಲ್ಲಿಯೂ ಇಲ್ಲ. ಯಾರು ಕದ್ದುಕೊಂಡು ಹೋಗಿದ್ದಾರು? ನಾನು ನಿನ್ನೆಯದಿನ ದೇವಸ್ಥಾನದ ಬಾಗಿಲಿಗೆ ಬೀಗ

ವನ್ನು ಭದ್ರವಾಗಿ ಹಾಕಿಕೊಂಡುಹೋಗಿದ್ದೆನು. ಹಾಕಿದ ಬೀಗವೂ ಮೊಹರೂ ಹಾಕಿದಹಾಗೆಯೇ ಇತ್ತು. ಬಳೆಯು ಮಾತ್ರ ಅದೃಶ್ಯವಾಗಿದೆ. ಇನ್ನೇನು ಗತಿ? ಧರ್ಮಾಧಿಕಾರಿಗೆ ಇದು ತಿಳಿದರೆ ನನ್ನನ್ನು ಸುಮ್ಮನೇ ಬಿಡುವನೇ ? ಆದರೆ, ಇದರಲ್ಲಿ ನನ್ನ ತಪ್ಪೇನಿದೆ? ಏನಾದರೂ ಆಗಲಿ. ಈ ಕೂಡ ಲೇ ಇರುವ ಸಂಗತಿಯನ್ನು ಧರ್ಮಾಧಿಕಾರಿಗೆ ಹೇಳಿಕಳು ಹಿಸುವೆನು. ಇಲ್ಲದಿದ್ದರೆ, ನನ್ನಮೇಲೆ ಆಕ್ಷೇಪಣೆ ಬರಬ ಹುದು.

ಎಲಾ, ಹನುಮಾ ! ಹನುಮಾ !

(ಸೇವಕನು ಬರುವನು)

ಹನು-ಏನು ಅಯ್ಯನೋರೇ ? ಏನು, ಒಟು ಆತುರದಿಂದ ಕೂಗ್ತೀರಿ ?

ಅರ್ಚ-ಎಲಾ, ಹನುಮಾ, ಧರ್ಮಾಧಿಕಾರಿಗಳ ಬಳಿಗೆ ಈಗಲೇ ಓಡಿಹೋಗಬೇಕು.

ಹ-ಅದೇನು, ಅಂತಾ ತಲೆ ಹೋಗೋದು ?

ಅ-ಏನು ಎಂದು ಕೇಳ್ತೀ ! ದೇವರದು ಬಲಗೈಗೆ ತೊಡಿಸಿದ್ದ ಬಂಗಾರದ ಬಳೆ ಯಾರೋ ಕದ್ದು ಕೊಂಡುಹೋಗಿದ್ದಾರೆ. ಬೇಗ ಹೋಗಿ ಧರ್ಮಾಧಿಕಾರಿಯವರಿಗೆ ತಿಳಿಸು.

ಹ-ಆ ಯಪ್ನೋರು ಬಲೇ ಸಿಟ್ಟು ! ನಾನೋಗಿ ಇದೇಳೀರೆ ಇಡ್ಕೊಂಡು ನನ್ನೇ ವಡೀತಾರೆ. ನಾನೋಗೋಕಿಲ್ಲಪ್ಪ.

ಅ-ಎಲಾ, ಹನುಮಾ, ನಿನಗೆ ಸ್ವಲ್ಪವೂ ಬುದ್ಧಿಯಿಲ್ಲ. ಸಮ ಯವೇನೂ ಎಂದು ನೋಡುವುದಿಲ್ಲ. ನೀನು ಈಗ ಹೋಗಿ ಹೇಳದೆ ಇದ್ದರೆ, ನಿನ್ನದೂ ನನ್ನದೂ ಇಬ್ಬರದೂ ತಲೆ ಹೋಗುತ್ತೆ. ಮಾತಾಡಬೇಡ. ಓಡಿಹೋಗಿ ತಿಳಿಸಿ ಬಿಟ್ಟು ಬಾ.

ಹ-ಅಯ್ಯನೋರೇ, ಏನಾದ್ರೂ ಒಂದು ಪೀಕ್ಲಾಟಾ ತಂದಿ ಕ್ತೀರಲ್ಲಪ್ಪಾ! ಇನ್ನೇನ್ಮಾಡಾದು? ಓತೀನಿ.

(ಹನುಮನು ಓಡಿಹೋಗುವನು)

ಅರ್ಚ (ದೇವರಿಗೆ ಅಲಂಕಾರ ಮಾಡುತ್ತಾ)-ಇನ್ನೇನು ಗತಿ! ಧರ್ಮಾಧಿಕಾರಿಯು ಒಂದರೆ ನನ್ನನ್ನೇನು ಮಾಡುವನೋ ತಿಳಿಯದು.

(ಜನಗಳು ದೇವರ ಮಂಗಳಾರತಿಗೆ ಒಬ್ಬೊಬ್ಬರಾಗಿ ಪ್ರವೇಶ ಮಾಡುವರು. ಭಜನೆ ಕೂಟದವರೂ ಭಜನೆ ಮಾಡಿಕೊಂಡು ಬರುವರು. ರಾಧೆಯೂ ಬಂದು ಜನಗಳ ಹಿಂದೆ ನಿಂತುಕೊಳ್ಳುವಳು. ಧರ್ಮಾಧಿಕಾರಿಯು ಪ್ರವೇಶಿಸುವನು. ನೆರೆದಿದ್ದ ಜನಗಳೆಲ್ಲಾ ದಾರಿಯನ್ನು ಬಿಟ್ಟು ಸಾಲಾಗಿ ಎರಡು ಪಕ್ಕಗಳಲ್ಲಿಯೂ ನಿಲ್ಲುವರು.)

ಧರ್ಮಾ—ಅರ್ಚಕರೇ, ಇದೇನು ಸಮಾಚಾರ? ಬಳೆಯು ಮಾಯವಾಯಿತೆಂದರೇನು? ನೀವು ಬೇಗ ಕಂಡು ಹಿಡಿಯದಿದ್ದರೆ ನಿಮಗೆ ಕ್ರೂರವಾದ ಶಿಕ್ಷೆಯಾದೀತು.

ಅರ್ಚ (ನಡುಗುತ್ತಾ)-ಸ್ವಾಮಿ, ನಾನೊಂದೂ ಕಾಣೆ. ಸದ್ಯಕ್ಕೆ ಜನಗಳೆಲ್ಲರೂ ಕಾದಿರುವರು. ದೇವರಿಗೆ ಮಂಗಳಾರತಿಯನ್ನು ಮಾಡಿಬಿಟ್ಟು ಆಮೇಲೆ ಇದರ ವಿಷಯವಾಗಿ ಆಲೋಚನೆ ಮಾಡುವುದು ಸೂಕ್ತವಾಗಿ ತೋರುತ್ತದೆ.

ಧರ್ಮಾ—ಹಾಗೆಯೇ ಆಗಲಿ. ಜಾಗ್ರತೆ ಮಂಗಳಾರತಿಯನ್ನು ಮಾಡಿ.

(ಅರ್ಚಕನು ಮಂಗಳಾರತಿಯನ್ನು ಮಾಡಿ ಎಲ್ಲರಿಗೂ ಕೊಡುತ್ತಾ ಬಂದು ಕಡೆಗೆ ರಾಧೆಗೆ ಕೊಡುವನು. ರಾಧೆಯು ತನ್ನ ಕೈಯಿಂದ ಮಂಗಳಾರತಿಯನ್ನು ತೆಗೆದುಕೊಳ್ಳುವಳು. ಕೈಯಲ್ಲಿ ಬಳೆಯು ಕಾಣುವುದು.)

ಅರ್ಚ—ಆಹಾ, ರಾಧೆ! ಈ ಬಂಗಾರದ ಬಳೆಯು ಎಲ್ಲಿತ್ತು? ಇಲ್ಲಿ ಕೊಡು ನೋಡೋಣ.

(ರಾಧೆಯು ನಡುಗುತ್ತಾ ಭಂಗಾರದ ಬಳೆಯನ್ನು ಕೊಡುವಳು. ಅರ್ಚಕನು ಅದನ್ನು ಚೆನ್ನಾಗಿ ನೋಡುವನು.)

ಅರ್ಚ-ಆಹಾ, ಒಡವೆಯೇನೋ ಸಿಕ್ಕಿದಂತಾಯಿತು. (ಎಂದು ತೆಗೆದುಕೊಂಡುಹೋಗಿ ಅದನ್ನು ಧರ್ಮಾಧಿಕಾರಿಯ ಕೈಗೆ ಕೊಡುವನು) ಬಳೆಯು ದೇವದಾಸಿಯಾದ ರಾಧೆಯ ಕೈಯಲ್ಲಿತ್ತು. ಅವಳನ್ನು ಕರೆಯಿಸಿ ವಿಚಾರಿಸಿದರೆ ಎಲ್ಲವೂ ತಿಳಿಯುವುದು (ಎಂದು ತಾನೇ ಹೋಗಿ ರಾಧೆಯನ್ನು ಕರೆದುಕೊಂಡು ಬರುವನು.)

ಧರ್ಮ-ಈ ಬಳೆಯು ನಿನ್ನ ಬಳಿಗೆ ಹೇಗೆ ಬಂತು? ನಿಜ ಹೇಳು.

ರಾಧೆ-ಸ್ವಾಮಿಾ, ನಿನ್ನೆಯ ದಿನ ರಾತ್ರಿ ಪುರಂದರದಾಸರು ನಮ್ಮ ಮನೆಗೆ ಬಂದಿದ್ದಾಗ ಇದನ್ನು ಕೊಟ್ಟರು.

(ಎಲ್ಲರೂ ಆಶ್ಚರ್ಯಭರಿತರಾಗುವರು)

ಧ-(ಆಶ್ಚರ್ಯದಿಂದ) ಹಾ, ಏನು? ಪುರಂದರದಾಸರೇ?

ರಾ-ಅಹುದು ಸ್ವಾಮಿಾ, ಪುರಂದರದಾಸರು.

ಧ-ಏತಕ್ಕೆ ಬಂದಿದ್ದರು?

(ರಾಧೆಯು ನಾಚಿಕೆಯಿಂದ ತಲೆಬಾಗಿಸುವಳು)

ಧ-ಏಕೆ ನಾಚುತ್ತೀಯೆ? ಗೊತ್ತಾಯಿತು. ಅವರು ನಿನ್ನೊಡನೆ ಏನು ಹೇಳಿದರು?

ರಾ-ಸ್ವಾಮಿಾ, ಅವರು ನನ್ನೊಡನೆ ರಮಿಸಲು ಬಂದಿರುವೆನೆಂದು ಹೇಳಿ ಈ ಬಳೆಯನ್ನು ಕೈಗೆ ತೊಡಿಸಿಬಿಟ್ಟುಹೋದರು.

ಧ-ಇದೇನು! ಅತ್ಯಂತ ಆಶ್ಚರ್ಯವಾಗಿದೆ! ಅರ್ಚಕರೇ, ಈಕೆಯು ಹೇಳುವುದು ನಿಜವಿರಬಹುದೇ?

ಅ-ಸ್ವಾಮಿಾ, ಹೇಳುವುದಕ್ಕಾಗುವುದಿಲ್ಲ. ಬಾಹ್ಯ ವೈರಾಗ್ಯ, ಅಂತಃ ಏನೋ-ಯಾರು ಕಂಡಿದ್ದಾರೆ ?

ಧ-ರಾಧೇ, ನಿಜವಾಗಿ ಹೇಳು. ಸುಳ್ಳು ಹೇಳಿದರೆ ನಿನ್ನನ್ನು ಸುಮ್ಮನೆ ಬಿಡುವುದಿಲ್ಲ.

ರಾ-ಸತ್ಯವಾಗಿಯೂ, ಈ ವಿಠಲನ ಸಾಕ್ಷಿಯಾಗಿಯೂ ಪುರಂದರದಾಸರು ನನಗೆ ಇದನ್ನು ಕೊಟ್ಟರು. ನೀವೇನಾದರೂ ಮಾಡಿ. ಇದೇ ನಿಜವಾದ ಸಂಗತಿ.

ಧ-ಪುರಂದರದಾಸರು ಎಲ್ಲಾದರೂ ಓಡಿಹೋದಾರು. ಅರ್ಚಕರೇ, ಅವರನ್ನು ಸಧ್ಯಕ್ಕೆ ಕಾರಾಗೃಹದಲ್ಲಿ ಇಡಿಸಲು ಏರ್ಪಾಡು ಮಾಡುವುದು ಉತ್ತಮ. (ಎಂದು ತನ್ನ ಬಳಿಯಲ್ಲಿದ್ದ ಕಾರಾಗೃಹದ ಅಧಿಕಾರಿಯು ಕಡೆಗೆ ತಿರುಗಿ) ಪುರಂದರದಾಸರನ್ನು ತತ್ಕ್ಷಣವೇ ಕಾರಾಗೃಹದಲ್ಲಿ ನಿರ್ಬಂಧದಲ್ಲಿಡತಕ್ಕದ್ದು. ಸ್ವಲ್ಪವೂ ಸಾವಕಾಶ ಮಾಡಕೂಡದು. ಉತ್ತರೋತ್ತರ ನಾನು ಈ ವಿಷಯದಲ್ಲಿ ಮಾಡುವ ಅಪ್ಪಣೆಯನ್ನು ನಿರೀಕ್ಷಿಸುತ್ತಿದ್ದು ಅದಕ್ಕನುಸಾರವಾಗಿ ನಡೆಯತಕ್ಕದ್ದು.

ಕಾರಾ. ಅಧಿ-ಮಹಾಸ್ವಾಮಿಯವರ ಅಪ್ಪಣೆಯಂತೆ ನಡೆಯಿಸುವೆನು. (ಧರ್ಮಾಧಿಕಾರಿಯು ಹೊರಟುಹೋಗುವನು. ಅರ್ಚಕನ ಬಳಿಗೆ ಅಲ್ಲಿ ನೆರೆದಿದ್ದವರಲ್ಲಿ ಕೆಲವರು ಹೋಗುವರು)

ಜನಗಳು-ಭಟ್ಟರೇ, ಇದೇನು ಸಮಾಚಾರ ? ಧರ್ಮಾಧಿಕಾರಿಗಳು ಅದೇನೋ ಪುರಂದರದಾಸರ ಹೆಸರು ಹೇಳುತ್ತಾ ಇದ್ದರು.

ಅರ್ಚ—ಏನೋ ಅದೆಲ್ಲಾ ನಿಮಗೇತಕ್ಕೆ ?

ಒಬ್ಬನು-ಭಟ್ಟರೇ, ನಮಗೆ ಗೊತ್ತಿಲ್ಲವೋ? ಬಂಗಾರದ ಬಳೆ.

ಇನ್ನೊಬ್ಬ—ರಾಧೆಯ ಕೈಯಲ್ಲಿದ್ದದ್ದು.

೨-ಏನಪ್ಪಾ, ಎಲ್ಲಾ ತಿಳಿದುಕೊಂಡಿದ್ದೀರಿ. ಇನ್ನು ಇದರಲ್ಲಿ ಗುಟ್ಟೇನು ?

ಮತ್ತೊಬ್ಬ—ಮತ್ತೇನು ? ಸುಮ್ಮನೆ, ಇರುವ ಸಂಗತಿ ಹೇಳ ಬಾರದೋ ?

ಅರ್ಚ-ಪುರಂದರದಾಸರು ನಿನ್ನೆಯ ರಾತ್ರಿ ರಾಧೆಯ ಮನೆಗೆ ಹೋಗಿ ಅವಳಿಗೆ ದೇವರಿಗೆ ಸೇರಿದ ಬಂಗಾರದ ಬಳೆಯನ್ನು ಕೊಟ್ಟು ಬಂದಿದ್ದರಂತೆ.

ಒಬ್ಬ-ಎಲಾ, ದಾಸ !

ಇನ್ನೊಬ್ಬ-ಅಬ್ಬಬ್ಬ, ಚೆನ್ನಾಯಿತು !

ಅರ್ಚಕ-ಈಗ ಸಧ್ಯಕ್ಕೆ ಪುರಂದರದಾಸರನ್ನು ಕಾರಾಗೃಹದಲ್ಲಿಡುವಂತೆ ಧರ್ಮಾಧಿಕಾರಿಗಳ ಅಪ್ಪಣೆಯಾಗಿರುವುದು.

ಜನಗಳು-ಸರಿ. ಒಳ್ಳೆ ಕೆಲಸವಾಯಿತು. ನಾವು ಹೋಗೋಣ, ನಡೆಯಿರಿ. (ಎಂದು ಹೊರಡುತ್ತಿರುವರು)

ಘರದೆಯು ಬೀಳುವುದು.



## — ನಾಲ್ಕನೆಯ ನೋಟ —

(ಒಂದು ಬೀದಿ-ಇಬ್ಬರು ಪುರನಿವಾಸಿಗಳ ಪ್ರವೇಶ)

೧ನೇ ಪುರನಿವಾಸಿ—ನೋಡಿದೇನಯ್ಯ? ದಾಸನ ಸಮಾಚಾರ?

೨ನೇ ಪು—ನನಗೆ ಮುಂಚೆಯೇ ಗೊತ್ತಿತ್ತು.

೧ನೇ ಪು—ಏನು-ದಾಸನ ಆಹ್ನೀಕ ಅಸಾಧ್ಯವಾಗಿತ್ತೇ !

೨ನೇ ಪು—ಎಲ್ಲಾ ಬೂಟಾಟಿಕೆ ಕಾಣಯ್ಯ !

೧ನೇ ಪು—ದಾಸರ ದ್ವಾದಶನಾಮಗಳೋ, ಮುದ್ರೆಗಳೋ!-

೨ನೇ ಪು—ಗೊತ್ತಿಲ್ಲವೇ ? ಎಲ್ಲಾ ಒಳಗಿರುವ ದುರ್ನಡತೆಯನ್ನು ಮುಚ್ಚುವುದಕ್ಕೇ-

(ಅಪ್ಪಣ್ಣನ ಪ್ರವೇಶ)

ಇಬ್ಬರು ಪು. ನಿ. ಗಳೂ—ನಮಸ್ಕಾರ ಅಪ್ಪಣ್ಣೋರೇ !

ಅಪ್ಪಣ್ಣ—ನಮಸ್ಕಾರ. ಏನು-ಬಿಡುವಾಗಿ ನಿಂತುಬಿಟ್ಟಿರಿ?

೧ನೇ ಪು—ಬಿಡುವಲ್ಲದೇ ಏನು ಸ್ವಾಮೀ ? ತಮ್ಮ ಹಾಗೆ ನಮಗೇನು ಪುರಸತ್ತಿಲ್ಲದಂತಹ ಕೆಲಸ ?

೨ನೇ ಪು—ತಮಗಾದರೆ ಸರ್ವದಾ ಪುರಂದರದಾಸರ ಬೆನ್ನು ಹತ್ತಿರುವುದೇ ಕೆಲಸ.

ಅ—ಅಣ್ಣಾ, ಮಹನೀಯರ ಸಹವಾಸ ಸಿಕ್ಕುವುದೇ ಕಷ್ಟ. ಅಂತಹವರ ಸತ್ಸಂಗದಲ್ಲಿದ್ದರೆ ನಾವೂ ಉದ್ಧಾರವಾಗುವೆವು.

೧ನೇ ಪು—ಸರಿ. ಒಳ್ಳೆಯ ಸಂಗವನ್ನೇ ಹುಡುಕಿದಿರಿ !

೨ನೇ ಪು—ಸರಿಯೋ, ಬಿಡಬೇಡಿ ಸ್ವಾಮೀ ; ಇಂತಹ ಸತ್ಸಂಗದಲ್ಲಿದ್ದರೆ ನಿಮಗೂ ಒಳ್ಳೆಯ ಮರ್ಯಾದೆ ಬರುತ್ತೆ !

ಅ—ಏನ್ರಯ್ಯಾ, ಬಹಳ ಅಪಹಾಸ್ಯವಾಗಿ ಮಾತನಾಡುತ್ತೀರಿ?

೨ನೇ ಪು—ಅಪಹಾಸ್ಯವೇಕೆ, ಸ್ವಾಮೀ ? ಪುರಂದರದಾಸರು ಬಹಳ ಶ್ರೋತ್ರಿಯರು ! ಸದ್ಗೃಹಸ್ಥರು ! ಕಾಣದಹಾಗೆ ರಾತ್ರಿಯವೇಳೆ ವೇಶ್ಯಾಗೃಹ ಪ್ರವೇಶ ಮಾತ್ರ !-

೧ನೇ ಪು-ಸುಮ್ಮನೇ ಅಷ್ಟೇ ಅಲ್ಲ-ಜೋರತನ ಬೇರೆ. ದೇವರ ಕೈಗೆ ಇಟ್ಟಿದ್ದ ಭಂಗಾರದ ಬಳೆಯನ್ನು ಕದ್ದು ರಾಧೆಗೆ ಕೊಟ್ಟು ಬಂದರು !

ಅ-(ಕಿವಿಯನ್ನು ಮುಚ್ಚಿಕೊಂಡು) ನಾರಾಯಣ ! ನಾರಾಯಣ ! ಹಾಗೆಲ್ಲಾ ಕೆಟ್ಟ ಮಾತನ್ನಾಡಬಾರದು.

೧ನೇ ಪು-ನಾವು ಆಡುವುದು ಕೆಟ್ಟ ಮಾತೋ ? - ಅವರು ಮಾಡಿದ್ದು ಕೆಟ್ಟ ಕೆಲಸವ್ವೋ ?

ಅ-ಸುಮ್ಮನೇ ಸುಳ್ಳು ದೂರಬೇಡಿರಯ್ಯಾ-

೨ನೇ ಪು—ನಾವು ಹೇಳುವುದು ಸುಳ್ಳು, ಪಾಪ ! ಧರ್ಮಾಧಿ

ಕಾರಿಯು ಅಪ್ಪಣೆಯಂತೆ ನಿಮ್ಮ ದಾಸನನ್ನು ಕಾರಾಗೃಹ ದಲ್ಲಿ ಬಂಧಿಸಿರುವುದು ಗೊತ್ತಿಲ್ಲವೋ ?

ಅ-ಇದೇನಯ್ಯಾ, ಅನ್ಯಾಯ? ಹೀಗೆಲ್ಲಾ ಮಾತನಾಡುತ್ತೀರಿ ! ಸ್ವಲ್ಪವಾದರೂ ಪಾಪಪುಣ್ಯದ ಭೀತಿಯೋ ಬೇಡವೇ ?

೧ನೇ ಪು-ಆರು ತಿಂಗಳಿಂದ ರಾಧೆಯ ಮನೆಗೆ ದಿನಾ ರಾತ್ರಿ ಹೋಗುತ್ತಾ ಇದ್ದವರದು ಪಾಪವಲ್ಲ ! - ಪಾಪ ಯಾರೂ ಕಾಣರೇನೋ !

೨ನೇ ಪು-ದಾಸನೂ ರಾಧೆಯೂ ಬೆಳದಿಂಗಳಲ್ಲಿ ನದಿಯ ಹತ್ತಿರ ವಿಹಾರ ಮಾಡುತ್ತಾ ಇದ್ದದ್ದು ನಾನೆಷ್ಟೋ ದಿನ ನೋಡಿ ದ್ದೇನೆ.

ಅ-ಈಗ ಚೆನ್ನಾಯಿತು. ಕಂಡವರು ಆಗಲೇ ಹಿಡಿಯಬಾರ ದಾಗಿತ್ತೇ ?

೨ನೇ ಪು-ನಮಗಿದೇ ಕೆಲಸವೋ ?

ಅ-ಇಲ್ಲ. ಭಗವದ್ಭಕ್ತರನ್ನು ಸಿಕ್ಕಿದ ಹಾಗೆ ಸುಳ್ಳು ಸುಳ್ಳು ದೂರುವುದೇ ಕೆಲಸ. ಅಣ್ಣಾ ನಿಮ್ಮ ಕೂಡೆ ಮಾತ ನಾಡಲು ನನಗೆ ಇಷ್ಟವಿಲ್ಲ.

ಸೀಸಪದ್ಯದ ಧಾಟಿ

ಹರಿಕಥಾಮೃತಸೇವೆ ಹರಿದಾಸರಲ್ಲದಲೆ |
ದುರುಳಮೂರ್ಖರು ಬಲ್ಲರೆ ||
ಸ್ತನ್ಯಪಾನದ ಸವಿಯ ಚಿಣ್ಣರರಿಯುವಂತೆ |
ಮಣ್ಣು ಬೊಂಬೆಯು ಬಲ್ಲುದೆ ||
ಅನ್ನಪಾನದ ಸವಿಯ ಕೊನೆನಾಲಿಗರಿವಂತೆ |
ಅಣಿಮಾಡಿಕೊಡುವಂಥ ಕರಬಲ್ಲುದೆ ||
ಸವನೀರದಾರ್ಭಟಕೆ ನವಿಲುಗಳು ನಲಿವಂತೆ |
ಕಾವುಕಾವೆಂಬ ಕಾಕವು ಬಲ್ಲುದೆ ||

ದಿವಸಾಧಿಪತಿಯು ದಿಸಲರಳುವಬ್ಜಗಳಂತೆ |
ದಿವಸಾಂಧಪಕ್ಷಿಗಳು ಹರ್ಷಿಸುವುವೇ ||
ಮಲ್ಲಿಮಲ್ಲಿಗೆ ಮುಡಿಯ ಬಲ್ಲ ಮಾನವರಂತೆ |
ಭಲ್ಲೂಕಗಳು ಅದರ ಬಗೆ ಬಲ್ಲುವೆ ||
ಫುಲ್ಲಾಕ್ಷ ರಘುಪತಿ ಪುರಂದರ ವಿಠಲನ |
ಬಲ್ಲ ಸಜ್ಜನರಂತೆ ಖುಲ್ಲರರಿಯುವರೇ ||

ನಾನು ಇಲ್ಲಿ ನಿಂತಿದ್ದೇ ತಪ್ಪು. ಇನ್ನು ಹೊರಡುತ್ತೇನೆ. (ಎಂದು ಹೊರಡುವಷ್ಟರಲ್ಲಿಯೇ ೩ನೇ ಪುರನಿವಾಸಿಯು ಪ್ರವೇಶಿಸುವನು.)

೩ನೇ ಪು--ಅಪ್ಪಣ್ಣನವರೇ ನಮಸ್ಕಾರ. ಇದೇನು ನಾನು ಬಂದದ್ದು ನೋಡಿ ಹೊರಡುವಂತೆ ಕಾಣುತ್ತದೆ.

ಅ–ಏನೂ ಇಲ್ಲಪ್ಪ. ಇವರಿಬ್ಬರೂ ಪೂಜ್ಯರಾದ ಪುರಂದರ ದಾಸರಮೇಲೆ ಏನೇನೋ ಇಲ್ಲದ ಅಪವಾದವನ್ನು ಹಾಕಿ ದೂರುತ್ತಿದ್ದರು. ನಾನು ಕಿವಿಯಲ್ಲಿ ಕೇಳಲಾರದೆ ಹೊರ ಡೋಣವೆಂದಿದ್ದೆ.

೩ನೇ ಪು-ಇಲ್ಲದ ಅಪವಾದವೇನು ಸ್ವಾಮಿ? ಎಲ್ಲರೂ ಕಣ್ಣಾರ ಕಂಡ ವಿಷಯ. ಆ ವೇಶ್ಯಾಲೋಲನಾದ ಬೂಟಾಟಿಕೆ ದಾಸನ ವಿಷಯ ಯಾರಿಗೆ ಗೊತ್ತಿಲ್ಲ?

ಅ-ಅಯ್ಯಯ್ಯೋ, ಇದೇನು ಬಂತು? ಎಲ್ಲರಿಗೂ ಈ ತರಹ ಹುಚ್ಚು ಹಿಡಿದುಬಿಟ್ಟಿದೆ! ದಾಸರು ಹಾಗೆಲ್ಲಾ ಬೂಟಾಟಿಕೆ ಇಲ್ಲವಯ್ಯಾ. ಅವರ ವಿಷಯ ನನಗೆ ಚೆನ್ನಾಗಿ ಗೊತ್ತಿದೆ.

೩ನೇ ಪು-ನಿಮಗಿಂತ ನನಗೆ ಚೆನ್ನಾಗಿ ಗೊತ್ತಿದೆ. ಅವರ ನಿಜಸ್ವಭಾವ ಅವರ ಮಾತಿನಿಂದಲೇ ತೋರಿಸಿಕೊಡಲೇ?

ಅ-ಹಾಗೆಂದರೇನಪ್ಪ? ಅದೇನು ಹೇಳು ನೋಡೋಣ?

೩ನೇ ಪು-ನಿಮ್ಮ ದಾಸ ಎಲ್ಲಾ ಅಭಿಮಾನವನ್ನೂ ಬಿಟ್ಟಿರುವ

ನೆಂದು ಹೇಳುತ್ತೀರಿ. ಅವನಿಗೆ ಎಷ್ಟು ದುರಾಶೆ? ಎಷ್ಟು ನೀಚತನ?

ಅ-ಏನಪ್ಪ, ಅಂತಹುದು?

೩ನೇ ಪು—ಪಾಪ! ನೀವು ಕೇಳಲಿಲ್ಲವೇನೋ? ಸುಮ್ಮನೆ ಕಾಣದವರಹಾಗೆ ನಟಿಸಬೇಡಿ. ಮೊನ್ನೆ ಹರಿಕೀರ್ತನೆ ಯನ್ನು ಕೇಳಿ ಬರುತ್ತಾ,

ರಾಗ ಮಧ್ಯಮಾವತಿ

ಪಾಪೋಸು ಹೋದವಲ್ಲ ಸ್ವಾಮಿ ಎನ್ನ || ಪ ||
ಅಪಾರ ದಿನಗಳಿಂದ ಅರ್ಜನೆ ಮಾಡಿದ || ಅನು ||

ಎಂದು ವದರಿಕೊಂಡುದನ್ನು ಯಾರುತಾನೇ ಕೇಳಿಲ್ಲ? ಇಂತಹವನು ವಿರಕ್ತನಾದ ಹರಿದಾಸನಂತೆ!

(ಅಪ್ಪಣ್ಣನು ನಗುವನು)

೨ನೇ-ಅಹುದು. ಈಗ ನನಗೆ ಜ್ಞಾಪಕಕ್ಕೆ ಬಂತು. ಮೊನ್ನೆ ಒಬ್ಬ ಶಿಷ್ಯನನ್ನು ಕೂಡಿಸಿಕೊಂಡು ಅವನಿಗೆ 'ಗುಡಿಗುಡಿ ಯನು ಸೇದಿಸೋಡೋ' ಎಂದು ಉಪದೇಶ ಮಾಡುತ್ತಿದ್ದರು. ಏನು ಆಭಾಸ! ಇಂತಹ ದುರಭ್ಯಾಸಗಳನ್ನು ಹೇಳಿಕೊಡುವವರು ಸದ್ಗುರುವಂತೆ!

(ಅಪ್ಪಣ್ಣನು ಪುನಃ ನಗುವನು)

೧ನೇ ಪು-ಸರಿ. ನನಗೂ ಈಗ ಜ್ಞಾಪಕಕ್ಕೆ ಬಂತು. ಈ ದಾಸನಿಗೆ ಮಾನ ಮರ್ಯಾದೆಗಳೇನಾದರೂ ಉಂಟೇ? ಮಾಡುವುದೋ—ತಿರುಪ. ಆದರಲ್ಲಿ ಎಷ್ಟು ದುರಹಂಕಾರ! ಮೊನ್ನೆ ಭಿಕ್ಷಕ್ಕೆ ಯಾವುದೋ ಮನೆಗೆ ಹೋಗಿದ್ದ-ಇವನ ಯೋಗ್ಯತೆ ಗೊತ್ತಿದ್ದವರು ಆ ಮನೆಯ ಹೆಂಗಸರು-ಇವನು ಬರುವುದನ್ನು ನೋಡಿ ಬಾಗಿಲನ್ನು ಹಾಕಿಕೊಂಡರು.

ಅದಕ್ಕೆ ಈ ದಾಸ ಬಾಯಿ ಮುಚ್ಚಿಕೊಂಡು ಸುಮ್ಮನೆ ಬರುವುದು ಬಿಟ್ಟು: 'ಕದವಾ ಮುಚ್ಚಿದಳದಾಕೋ ಗಯ್ಯಾಳಿ ಮೂಳಿ' ಎಂದುಕೊಂಡು ಅವರೆದುರಿಗೆ ಬೈದು ಕೊಂಡು ಹೋಗುವುದೇ? ಇದೇ,-ಜ್ಞಾನಿಯು ಲಕ್ಷಣ?

(ಅಪ್ಪಣ್ಣನು ಬಹಳ ಘಟ್ಟಿಯಾಗಿ ನಗುವನು)

೩ನೇ ಪು-ಏನು, ಈಗಲಾದರೂ ಗೊತ್ತಾಯಿತೋ ನಿಮ್ಮ ದಾಸನ ಯೋಗ್ಯತೆ? ಇನ್ನಾದರೂ ಅವರ ಸಹವಾಸವನ್ನು ಬಿಟ್ಟು ಬಿಡಿ.

ಅ-(ನಗುತ್ತಾ)—ನಿಮ್ಮ ಮಾತುಗಳನ್ನು ಕೇಳಿದಷ್ಟೂ ನನಗೆ ದಾಸರಲ್ಲಿರುವ ಭಕ್ತಿಯು ಮತ್ತಷ್ಟು ಹೆಚ್ಚುತ್ತಿರುವುದು. ನಾನು ನಿರಂತರವೂ ದಾಸರ ಉಪದೇಶಕ್ಕೇ ಒಳಪಟ್ಟು ಅವರನ್ನು ಸೇವಿಸುವೆನು.

೩ನೇ ಪು-ದಾಸನು ನಿಮಗೇನೋ ಮಂಕು ಬೂದಿಯನ್ನು ಚೆಲ್ಲಿ ರಬೇಕು.

ಅ-ದಾಸರು ಚೆಲ್ಲಿರುವ ಮಂಕುಬೂದಿಯಿಂದ ನಾನು ಕೃತಾರ್ಥನಾದೆನು. ಅದು ಹಾಗಿರಲಿ. ನಿಮ್ಮಂತಹ ಅವಿವೇಕ ಶಿರೋಮಣಿಗಳು ಭೂಮಿಯಮೇಲೆ ಇನ್ನಾರಿದ್ದಾರೆ?

೧ನೇ, ೨ನೇ, ಮತ್ತು ೩ನೇ ಪು—ಏನು, ಆಚಾರ್ರ್ರ! ನಿಮಗೇನು ತಲೆಗಿಲೆ ತಿರುಗುತ್ತದೆಯೋ? ಸಿಕ್ಕಿದ ಹಾಗೆಲ್ಲಾ ಹರಟುತ್ತೀರಿ!

ಅ-ನನ್ನ ಮೇಲೆ ಸಿಟ್ಟುಕೊಳ್ಳಬೇಡಿ. ದಯವಿಟ್ಟು ನಾನು ಹೇಳುವುದನ್ನು ಪೂರ್ತಿಯಾಗಿ ಕೇಳಿ. ಆ ಮೇಲೆ ನಿಮಗೇ ಎಲ್ಲಾ ಗೊತ್ತಾಗುತ್ತದೆ.

೩ನೇ ಪು-(ಇನ್ನಿಬ್ಬರೊಡನೆ)—ಏನು ಹೇಳುತ್ತಾರೋ ಹೇಳಲಿ. ಸುಮ್ಮನಿರಿ. ಕೇಳೋಣ.

ಅ-ನಿಮ್ಮ ಮಾತುಗಳಿಂದಲೇ ನೀವು ಮಾಡಿದ ಅಪವಾದಗಳು ಸುಳ್ಳೆಂಬುದನ್ನು ತೋರಿಸುತ್ತೇನೆ. ಕೇಳಿ. ಅವರ ಮಾತು ಗಳಿಗೆಲ್ಲಾ ಅಪಾರ್ಥವನ್ನು ಮಾಡಿಕೊಂಡಿರುವಿರಿ.

'ಪಾಪ್ಹೋಸು ಹೋದವಲ್ಲ' ಎಂದು ಹೇಳಿದುದರ ಅರ್ಥವೇನು ಗೊತ್ತೋ? ಅವರ ಈ ಪದವನ್ನು ಸ್ವಲ್ಪ ಹೇಳುತ್ತೇನೆ. ಕೇಳಿ.

ರಾಗ ಮಧ್ಯಮಾವತಿ

ಪಾಪ್ಹೋಸು ಹೋದವಲ್ಲ ಸ್ವಾಮಿಾ ಎನ್ನ ‖ ಪ ‖
ಅಪಾರ ದಿನಗಳಿಂದ ಆರ್ಜನೆ ಮಾಡಿದ ‖ ಅ ‖
ಪರಮ ಭಾಗವತರು ಹರಿಕಥೆ ಪೇಳಲು |
ಪರಮ ಭಕುತಿಯಿಂದ ಕೇಳುತಿರೆ |
ಪರಮ ಪುರುಷನ ಮನಸಿಗೆ ಬಂದೀಗ ‖ ೧ ‖

ಹರಿ ಕೀರ್ತನೆಯನ್ನು ಕೇಳಿ ಪಾಪವೆಲ್ಲಾ ನಾಶವಾದ ವೆಂದು ಹೇಳಿರುವರು.

'ಗುಡಿ ಗುಡಿಯನು ಸೇದಿನೋಡೋ' ಎಂಬ ಪದದ ಅರ್ಥವನ್ನು ತಿಳಿಯಲು ನಿಮ್ಮಿಂದ ಏನಾದೀತು? ಅದನ್ನು ಸ್ವಲ್ಪ ಹೇಳುತ್ತೇನೆ ಕೇಳಿ. ಆಮೇಲೆ ಅದರಲ್ಲಿ ಅಡಗಿರುವ ತತ್ವವು ಗೊತ್ತಾಗುವುದು.

ರಾಗ ಆನಂದಭೈರವಿ

ಗುಡಿಗುಡಿಯನು ಸೇದಿನೋಡೋ | ಸೇದಿನೋಡೋ ‖ ಪ ‖
ಒಡಲ ಪಾಪಗಳೆಲ್ಲ ಕಿತ್ತು ಈಡಾಡೋ ‖ ಅ ‖

* * *

ಮನವೆಂಬ ಸಂಚಿಯ ಬಿಚ್ಚಿ | ನಿನ್ನ |
ದಿನದಿನದ ಪಾಪದ ಭಂಗಿಯ ಕೊಚ್ಚಿ |
ತನುವೆಂಬ ಚಿಲುಮೆಯೊಳ್ ಮುಚ್ಚಿ | ಅಚ್ಯ |
ತನ ನಾಮವೆಂಬ ಕಿಚ್ಚನೆ ಹಚ್ಚಿ ‖ ೧ ‖

ಪಾಪವನ್ನು ಸುಟ್ಟು ಪುಣ್ಯವನ್ನು ಗಳಿಸಿಕೊಳ್ಳಬೇಕೆಂದು ಆ ಪದದಲ್ಲಿ ಉಪದೇಶಮಾಡಿರುವರು.

'ಕದವಾ ಮುಚ್ಚಿದಳದಕೋ' ಎಂಬ ಪದದಲ್ಲಿ ಅವರು ಯಾವ ಸ್ತ್ರೀಯನ್ನೂ ಉದ್ದೇಶಿಸಿ ಹೇಳಲಿಲ್ಲ ಕೇಳಿ.

ರಾಗ ಮಧ್ಯಮಾವತಿ

ಕದವಾ ಮುಚ್ಚಿದಳದಕೋ ಗಯ್ಯಾಳಿ ಮೂಳಿ ‖ ಪ ‖
ಕದವಾ ಮುಚ್ಚಿದಳದಕೋ ಚಿಲುಕ ಅಲ್ಲಾಡುತಿದೆ |
ಒಳಗಿದ್ದ ಪಾಪವು ಹೊರಗೆ ಹೋದೀತೆಂದು ‖ ಅ ‖

ಪ್ರತಿಯೊಬ್ಬ ಜೀವಾತ್ಮನೂ ಪರಮಾತ್ಮನೆದುರಿಗೆ ಸ್ತ್ರೀಯೆಂದೇ ಭಾವಿಸೋಣ. ನಮ್ಮ ಪಾಪ ಕರ್ಮಗಳು ಆಚೆಗೆ ಹೋಗದಂತೆ ನಮ್ಮ ಹೃನ್ಮಂದಿರದ ಬಾಗಿಲನ್ನು ಹಾಕಿಕೊಂಡು ಪರಮಾತ್ಮನಿಗೆ ಒಳಗೆ ಸ್ಥಳ ಕೊಡದಿರುವ ಪಾಮರಮನುಜರಿಗೋಸ್ಕರ ದಾಸರು ಈ ಉತ್ಕೃಷ್ಟ ಪದವನ್ನು ಹಾಡಿರುವರು.

ನೀವು ಅವುಗಳ ಸರಿಯಾದ ಅರ್ಥವನ್ನು ತಿಳಿದುಕೊಳ್ಳದೆ ಇಲ್ಲದ ಅಪವಾದವನ್ನು ಮಾಡಿ ರೌರವಾದಿ ನರಕಕ್ಕೆ ಬೀಳುವಿರಿ. ಅವರ ಕೀರ್ತನೆಗಳೆಲ್ಲಾ ಪ್ರತಿಯೊಂದೂ ಒಂದೊಂದು ಅಮೌಲ್ಯವಾದ ರತ್ನವೆಂದು ತಿಳಿಯಿರಿ.

೩ನೇ ಪು-ಆಹಾ, ಬಹಳ ಸ್ವಾರಸ್ಯವಾಗಿದೆ! ಏನುತತ್ವ!

೧ನೇ ಪು-ಏನು ಉಪದೇಶ! ಮಹಾನುಭಾವರು!

೨ನೇ ಪು-ಅದು ಸರಿಯೇ. ಈಗ ಪ್ರಕೃತ ಸಂದರ್ಭದಲ್ಲಿ ನಡೆದಿರುವುದಕ್ಕೆ ಏನು ಹೇಳುತ್ತೀರಿ?

ಅ-ಅಣ್ಣಾ, ಇದೇನೋ ವಿಚಿತ್ರವಾಗಿದೆ. ಯಾರೋ ಅಸೂಯೆಯಿಂದಲೋ ಇಲ್ಲಾ ಅಜ್ಞಾನದಿಂದಲೋ ಸುಳ್ಳು ಅಪವಾದವನ್ನು ಅವರ ಮೇಲೆ ಆರೋಪಣೆ ಮಾಡಿರುವರು.

ಸತ್ಯಕ್ಕೆ ಎಂದಿಗೂ ಚ್ಯುತಿಯಿಲ್ಲ. ತಾತ್ಕಾಲಿಕ ತೊಂದರೆಗೆ ಗುರಿಯಾದರೂ ಸತ್ಯಕ್ಕೆ ಕಡೆಗೆ ಜಯವುಂಟೇ ಉಂಟು!

ಮೂರು ಜನಗಳೂ--ಆಗಲಿ ಹಾಗಾದರೆ, ದಾಸರ ಪರಿಣಾಮವೇನಾಗುವುದೋ ನೋಡೋಣ ನಡೆಯಿರಿ.

(ಎಂದು ಎಲ್ಲರೂ ಹೊರಡುವರು)



## — ಐ ದ ನೆ ಯ ನೋ ಟ —

(ಕಾರಾಗೃಹ—ಪುರಂದರ ದಾಸರು ನಿಂತುಕೊಂಡು ಕೈಮುಗಿಯುತ್ತಾ ಪ್ರಾರ್ಥಿಸುತ್ತಿರುವರು)

ಪುರಂ—ಆಹಾ, ಪರಮಾತ್ಮಾ! ನಿನ್ನ ಭಕ್ತನಾದ ನನಗೆ ಈ ಕಾರಾಗೃಹವಾಸವು ಪ್ರಾಪ್ತಿಯಾಗುವುದೆಂದು ನಾನು ಎಂದೆಂದಿಗೂ ತಿಳಿದಿರಲಿಲ್ಲ. ಇದೇನು ವಿಚಿತ್ರವೋ! ಇದೇನು ನಿನ್ನ ಲೀಲೆಯೋ ನನಗೊಂದೂ ತಿಳಿಯದು. ತಪೋನಿಧಿಗಳಾದ ಪರಮ ಯೋಗಿಗಳು ಕಲ್ಪ ಕಲ್ಪಾಂತರಗಳು ಪ್ರಯತ್ನಿಸಿದರೂ ಅಪಾರವಾದ ನಿನ್ನ ಗುಣಸಾಗರದಲ್ಲಿ ಒಂದು ಬಿಂದುಮಾತ್ರದಷ್ಟೂ ತಿಳಿಯದೆ ಬಳಲುತ್ತಿರುವರು. ಹೀಗಿರುವಲ್ಲಿ ಕೇವಲ ಅವರ ಪಾದ ಧೂಳಿಗೂ ಯೋಗ್ಯನಲ್ಲದ ನಾನು ನಿನ್ನ ಲೀಲೆಯ ಚಿತ್ರ ವಿಚಿತ್ರಗಳನ್ನು ಏನು ತಾನೇ ತಿಳಿದೇನು? ಭಕ್ತವತ್ಸಲಾ! ನೀನು ಯಾವ ರೂಪದಲ್ಲಿ, ಯಾವ ಸ್ಥಳದಲ್ಲಿ ದರ್ಶನವನ್ನು ಕೊಡುವೆಯೋ ಹೇಳಲಾಗುವುದಿಲ್ಲ. ಸರ್ವ ವ್ಯಾಪಿಯಾದ ನೀನು ಪ್ರಹ್ಲಾದನಿಗೆ ಕಠಿಣ ತಮವಾದ ಉಕ್ಕಿನ ಸ್ತಂಭದಲ್ಲಿ ದರ್ಶನವನ್ನು ಕೊಡಲಿಲ್ಲವೇ? ಆದುದರಿಂದ ಈ ಕಾರಾಗೃಹ

ವನ್ನೂ ನಿನ್ನ ಆವಾಸಸ್ಥಾನವೆಂದೇ ಭಾವಿಸುವೆನು. ಇಷ್ಟೇಕೆ? ಕೃಷ್ಣಾವತಾರದಲ್ಲಿ ಕಾರಾಗೃಹದಲ್ಲಲ್ಲವೇ ನೀನು ಜನ್ಮವನ್ನೆತ್ತಿದುದು!

ಆದರೆ, ನನಗೆ ಇಲ್ಲಿ ಮಾನವರಿಂದ ಇಂತಹ ಬಂಧನವು ಪ್ರಾಪ್ತವಾಗಿರುವುದಲ್ಲಾ! ಪರಮಾತ್ಮಾ, ನನ್ನಮೇಲೆ ಈ ರೀತಿ ಪರಸತಿಗಮನ ಮತ್ತು ಚೋರತನ ಇವೆರಡು ಸುಳ್ಳು ಅಪವಾದಗಳು ಬಂದಿರುವುದಕ್ಕೆ ಕಾರಣವೇನಿರಬಹುದು? ನಾನು ಮಾಡಿರುವ ಮಹಾಪರಾಧವೇನು? (ಎಂದು ಸ್ವಲ್ಪ ಹೊತ್ತು ಆಲೋಚಿಸಿ) ಆಹಾ, ಈಗ ಜ್ಞಾಪಕಕ್ಕೆ ಬಂತು.

ರಾಗ ಷಂತುವರಾಳಿ ಆದಿತಾಳ

ಮುಯ್ಯಕೆ ಮುಯ್ಯ ತೀರಿತು ‖ ಪ ‖

ಜಗದಯ್ಯ-ವಿಜಯ-ಸಹಾಯ-ಪಂಢರಿರಾಯಾ ‖ ಅನು ‖

ಸಣ್ಣವನೆಂದು ನಾ ನೀರು ತಾರೆಂದರೆ |
ಬೆಣ್ಣೆಗಳ್ಳ ಕೃಷ್ಣ ಮರಳು ಮಾಡಿ |
ಉಣ್ಣಂಥ ಬಿಸಿಯಾದ ನೀರು ತಂದಿತ್ತರೆ |
ಕಣ್ಣು ಕಾಣದೆ ನಿನ್ನ ಕೊಣದೆ ಪಂಢರಿ ರಾಯಾ ‖ ೧ ‖
ಎನ್ನ ಪೆಸರು ಮಾಡಿ ಸೂಳೆಗೆ ಕಂಕಣ |
ವನ್ನು ನೀನೇ ಇಟ್ಟು ನಿಜವು ಮಾಡಿ |
ಎನ್ನ ಅಪಹಾಸ್ಯದಿ ಒಣ್ಣನೆಮಾಡಿ |
ಮಾನವರೊಳಗೆಲ್ಲಾ ಮಾನವಗೊಂಡೆಯಾ ‖ ೨ ‖
ಭಕ್ತವತ್ಸಲನೆಂಬ ಬಿರುದು ಬೇಕಾದೊಡೆ |
ಶಕ್ತ, ಸುಮ್ಮನೆ ಕಾಯೋ ಸುಲಭದಿಂದ |
ಯುಕ್ತೀಲಿ ನಿನ್ನಂಥ ದೇವರ ನಾ ಕಾಣೆ |
ಮುಕ್ತೇಶ ಪುರಂದರವಿಠಲ ಪಂಢರಿರಾಯಾ ‖ ೩ ‖

ವಿಠಲ! ಪಾಂಡುರಂಗ ವಿಠಲ! ಚೆನ್ನಾಯಿತು. ಇದು ನನ್ನ ಅಪರಾಧವೋ ? ಅಪರಾಧಮಾಡಿದವನು ನಾನೋ ? ದೇವಾ,

ರಾಗಾ ಭೈರವಿ

ಅಪರಾಧಿ ನಾನಲ್ಲ । ಅಪರಾಧವೆನಗಿಲ್ಲ ।
ಕಪಟನಾಟಕ ಸೂತ್ರಧಾರಿ ನೀನೇ ॥ ಪ ॥

ನೀನೇ ಆಡಿಸದಿರಲು ಜಡವನಿತೆಯು ಬೊಂಬೆ ।
ಏನುಮಾಡಲು ಬಲ್ಲದು ತಾನು ಬೇರೇ ॥
ನೀನಿಟ್ಟ ಸೂತ್ರದಿಂ ಚಲಿಪ ಕೈಕಾಲುಗಳು ।
ನೀನೆ ಮುಗ್ಗಿಸಲು ಮುಗ್ಗುವದೇಹ ತಾನಾಗಿ ॥ ೧ ॥

ಒಂದೆಂಟು ಬಾಗಿಲುಗಳುಳ್ಳ ಪಟ್ಟಣಕೆ ತನ ।
ಗೆಂದು ಇಪ್ಪತ್ತೆಂಟು ಮನೆಯಾಳ್ಗಳಾ ॥
ತಂದು ಕಾವಲ ನಿಲಸಿ ಎನ್ನ ನೀ ಒಳಗಿಟ್ಟು ।
ಮುಂದೆ ಭವದಲಿ ಭವಣೆಪುದು ನಿನ್ನದನ್ಯಾಯಾ ॥ ೨ ॥

ಯಂತ್ರವಾಹಕ ನೀನೆ ಒಳಗಿದ್ದು ಎನ್ನ ಸ್ವ ।
ತಂತ್ರನೆಂದೆನಿಸಿ ಕೊಲಿಸುವರೆ ಹೇಳೊ ॥
ಕಂತುಪಿತ ಲಕ್ಷ್ಮೀಶ ಎಂತಾಚಲಾತಹು(ದೊ) ದ ।
(ಅ)ನಂತಮೂರುತಿ ನಮ್ಮ ಪುರಂದರಾವಿಠಲಾ ॥ ೩ ॥

ಆದುದರಿಂದ, ಸ್ವಾಮೀ, ಅಪರಾಧವೆನ್ನು ಮಾಡಲು ನನ್ನ ಸ್ವತಂತ್ರವೇನು ? ನೀನು ಸೂತ್ರಧಾರಿಯಾಗಿ ನಿಂತು ಎಲ್ಲಾ ಕೆಲಸಗಳನ್ನೂ ಮಾಡಿಸುತ್ತಿರುವೆ ಹೀಗಿರುವಲ್ಲಿ ಅಪರಾಧ ಮಾಡಿದೆನೆಂದು ನನ್ನನ್ನು ಈ ರೀತಿ ಕಷ್ಟಕ್ಕೆ ಗುರಿಮಾಡಿರುವೆ ಯಲ್ಲಾ! ನಿನಗೆ ಇದು ನ್ಯಾಯುವೋ ? ಇದು ಯಾರಾದರೂ ಒಪ್ಪತಕ್ಕ ಮಾತೋ ? ಆದರೆ ಕೇಳುವವರಾರು ? ನಿನಗೆ

ಯಾರೂ ಸರಿಯಿಲ್ಲ, ನನಗೆ ನಿನ್ನ ಹೊರತು ಇನ್ನಾರೂ ಗತಿ ಯಿಲ್ಲ, ಆದುದರಿಂದ ನಿನಗೂ ನನಗೂ ನ್ಯಾಯವನ್ನು ಹೇಳು ವವರಿನ್ನಾರು ? ನಾನು ನನ್ನ ಬಿನ್ನಪವನ್ನು ಇನ್ನಾರೆದುರಿಗೆ ಹೇಳಬೇಕು ?

"ಸರ್ವ ಸ್ವತಂತ್ರ ! ಕರುಣಾಕರ! ಜಗದೊಡೆಯ ! ದಯಾ ಸಮುದ್ರ !" ಎಂಬ ಅಸಂಖ್ಯಾಕವಾದ ಬಿರುದುಗಳಿಂದ ಎಲ್ಲ ರೂ ನಿನ್ನನ್ನು ಹೊಗಳುತ್ತಿರುವರು. ಆದಕಾರಣ, ಕರಿರಾಜ ವರದ! ನಾನು ನಿನಗಲ್ಲದೆ ಇನ್ನಾರಿಗೆ ಮೊರೆಯಿಡಲಿ ? ದಯಾ ಸಿಂಧುವಾದ ನೀನೇ ನನ್ನನ್ನು ಕಾಪಾಡಬೇಕು. ಪರ ಮಾತ್ಮಾ !

ರಾಗ ತೋಡಿ ಆದಿತಾಳ

ನೀನೆ ದಯಾಸಂಪನ್ನನೋ | ಕಾವೇರಿರಂಗಾ |
ನೀನೇ ಬ್ರಹ್ಮಾದಿ ವಂದ್ಯನೋ || ಪ ||
ಬಂಧುಗಳೆಲ್ಲರ ಮುಂದೆ ದ್ರುಪದನಾ |
ನಂದನೆಯಳ ತಂದು ಸೀರೆಯ ಸೆಳೆಯಲು ||
ಬಂದು ಕೃಷ್ಣಾ ಸಲಹೆಂದರೆ ಅಕ್ಷಯ |
ವೆಂದು ಕಾಯ್ದ ಗೋವಿಂದನು ನೀನೆ || ೧ ||
ನಿಂದಿತ ಕರ್ಮವ ನೊಂದುಳಿಯದೆ ಬೇ
ಕೆಂದು ಮಾಡಿದನಂದಜಾಮಿಳನು ||
ಕಂದ ನಾರಗಾನೆಂದರೆ ಮುಕ್ತಿಯ |
ಕುಂದದಲಿತ್ತ ಮುಕುಂದನು ನೀನೇ || ೨ ||
ಮತ್ತ ಗಜವನೆಗಳೊತ್ತಿ ಪಿಡಿಯೆ ಬಲು |
ಒತ್ಯಧರೋಷ್ಠದಿ ಮೃತ್ಯುವಿನಂತಿರೆ ||
ಭಕ್ತರ ಸಲಹುವ ಪುರಂದರವಿಠಲ |
ಹಸ್ತಿಗೊಲಿದ ಪರವಸ್ತುವು ನೀನೇ || ೩ ||

ನಾನು ಈ ಮಿಥ್ಯಾಪವಾದಕ್ಕೂ ಕಾರಾಗೃಹವಾಸಕ್ಕೂ ಹೆದರುವವನಲ್ಲ. ಇದಕ್ಕಿಂತಲೂ ಅಧಿಕವಾದ ಕಷ್ಟಗಳು ತರಂಗ ತರಂಗವಾಗಿ ಬರಲಿ.

## ಉಗಾಭೋಗ

ಉರಿಗಂಜೆ ಸೆರೆಗಂಜೆ ಶರೀರದ ಭಯಕಂಜೆ ।
ಹಾವಿಗಂಜೆ ಚೇಳಿಗಂಜೆ ॥
ಕತ್ತಿಯ ಧಾರೆಗಂಜೆ ।
ಇನ್ನೊಂದಕ್ಕಂಜುವೆ । ಇನ್ನೊಂದಕ್ಕಳುಕುವೆ ।
ಪರಧನ ಪರಸತಿಗೆರಡಕ್ಕಂಜುವೆನಯ್ಯ ।
ಹಿಂದೆ ಕೌರವ ರಾವಣರೇನಾಗಿಪೋದರೋ ।
ಮುಂದೆ ಸಲಹೋ ಪುರಂದರ ವಿಠಲಾ ॥

ಮತ್ತೆಷ್ಟು ಹಿಂಸೆಗಳು ಬಂದೊದಗಿದರೂ ನನಗೆ ಭಯ ವಿಲ್ಲ. ಆದರೆ, ನಾನು ಮಾನವ ನಿರ್ಮಿತವಾದ ಈ ನಿರ್ಬಂಧಕ್ಕೆ ಒಳಗಾಗುವವನಲ್ಲ.

ರಾಗಾ ಆನಂದಭೈರವಿ

ನಿನ್ನ ನಾಮದ ಭಂಡಾರ ಕದ್ದ ಕಳ್ಳನಿಗೆ ।
ನಿನ್ನ ಭಕುತಿಯೆಂಬ ಸಂಕೋಲೆಯನು ಹಾಕೊ ।
ನಿನ್ನ ಮುದ್ರೆಯಿಂದ ಕಾಸಿವತ್ತಿಸೊ ದೇವ ।
ನಿನ್ನ ಭಕ್ತರ ಎನಗೆ ಕಾವಲನಿಟ್ಟು ।
ನಿನ್ನ ವೈಕುಂಠ ದುರ್ಗಕ್ಕೆ ಕರೆದೊಯ್ದು ।
ಎನ್ನ ಸೆರೆಯ ಹಾಕೊ ಪುರಂದರವಿಠಲಾ ॥

ವಿಠಲಾ, ಇಹಲೋಕ ಬಂಧನವನ್ನು ನಾನು ಒಂದು ಕ್ಷಣ ವೂ ಅನುಭವಿಸಲಾರೆನು. ಇದನ್ನು ತಪ್ಪಿಸಿ ವೈಕುಂಠವೆಂಬ ಕಾರಾಗೃಹದಲ್ಲಿ ಸೆರೆಹಾಕಲು ಕರೆದೊಯ್ಯುವುದಕ್ಕೆ ತಡಮಾ ಡದೆ ಬಾ! ಬೇಗ ಬಾ!

ರಾಗಾ ಶಂಕರಾಭರಣ

ಬಾರಯ್ಯಾ ರಂಗ ಬಾರಯ್ಯಾ ಕೃಷ್ಣ |
ಬಾರಯ್ಯಾ ಸ್ವಾಮಿ ಬಾರಯ್ಯಾ || ಪ ||
ವಾರಣ ಭಯುವ ನಿವಾರಣೆ ಮಾಡಿದ |
ಕಾರುಣ್ಯನಿಧಿ ಎನ್ನ ಹೃದಯುಮಂದಿರಕೆ || ಅನು ||

ಮೊದಲಿಂದ ಬರಬಾರದೆ ನಾನು ಬಂದೆ |
ತುದಿ ಮೊದಲಿಲ್ಲದ್ದೊಂದಿದೆ ಅಪನಿಂದೆ |
ಇದು ಗೆದ್ದು ಕಳೆದುಪೋಪುದು ಹೇಗೆ ಮುಂದೆ |
ಪದುಮನಾಭ ತಪ್ಪು ಕ್ಷಮಿಸಯ್ಯ ತಂದೆ || ೧ ||

ಸ್ವಾಮೀ, ದೀನನಾಗಿ ನಾನು ನಿನ್ನನ್ನು ನಂಬಿದ್ದರೂ ನಿನ್ನ ಮನಸ್ಸು ಕರಗದೇ? "ನೀನೇ ನನಗೆ ತಂದೆ! ನೀನೇ ನನಗೆ ತಾಯಿ! ದೀನಬಂಧು! ನನ್ನನ್ನು ಮನ್ನಿಸಿ ಕಾಪಾಡು" ಎಂದು ಎಷ್ಟೆಷ್ಟು ಬೇಡಿದರೂ ನಿನಗೆ ಭಕ್ತನಮೇಲೆ ದಯಬರಲಿಲ್ಲವೇ?

ವಿಠಲಾ, ನಿನ್ನನ್ನು ಮಹಾ ದಯಾಳುವೆಂದು ಭಾವಿಸಿ ನಾನು ಇಷ್ಟು ದೈನ್ಯದಿಂದ ಬೇಡಿದುದಕ್ಕೆ ಈಗ ಸಾರ್ಥಕವಾಯಿತು! ನಿನ್ನ ಕಾರುಣ್ಯಕ್ಕೆ ಇದೇ ನಿದರ್ಶನವಲ್ಲವೇ? ಹೀಗೆ ಮಾಡಿದರಲ್ಲವೇ ನಿನಗೆ ಕೃಪಾಸಿಂಧುವೆಂಬ ಬಿರುದು ಬಹಳ ಚೆನ್ನಾಗಿ ಒಪ್ಪುವುದು! ಸಾಕು. ನೀನೇನು ಮಾಡುವೆ? ನನ್ನದೇ ತಪ್ಪು! ನಿನಗೆ ಹೆದರಿಕೊಂಡು ನಾನು ದೀನಭಾವವನ್ನು ತೋರಿಸಿದುದು ದೊಡ್ಡ ತಪ್ಪಾಯಿತು. ಪ್ರಸನ್ನನಾಗಿ ನನ್ನ ಮನೋರಥವನ್ನು ಈಡೇರಿಸಿಕೊಡದ ಮೇಲೆ ನನಗೆ ನಿನ್ನದೇನು ದಾಕ್ಷಿಣ್ಯ? ನಿನಗೆ ನಾನು ಹೆದರಿಕೊಂಡು ದೈನ್ಯವನ್ನು ತೋರಿದುದರಿಂದಲ್ಲವೇ ನಿನಗೆ ಇಷ್ಟು ಅಹಂಕಾರ!

ಇನ್ನು ನಾನು ನಿನಗೆ ಅಂಜುವುದಿಲ್ಲ. ನಿನಗೆ ಸರಿಯಾದ ಪ್ರತೀಕಾರ ಮಾಡಬೇಕು.

ವಿಠಲಾ! ಗೋಪಿದೇವಿಯಂತೆ ನಿನ್ನನ್ನು ನಾನು ವರಳಿಗೆ ಕಟ್ಟದೆ ಸುಮ್ಮನೆ ದೈನ್ಯಪಡುತ್ತಿರುವೆನು. ಭೃಗುಮುನಿಯಂತೆ ನಿನ್ನ ಎದೆಯ ಮೇಲೊದೆಯದೆ ಬರೀ ದೈನ್ಯ ಪಡುತ್ತಿರುವೆನು. ಹೀಗೆ ದೈನ್ಯಪಟ್ಟರೆ, ನೀನು ನನ್ನ ಮಾತನ್ನು ಕೇಳುವೆಯಾ ?

ವಿಠಲಾ! ಕಾಳಿಂಗನಂತೆ ನಿನ್ನನ್ನು ಕಟ್ಟಿ ಬಿಗಿಯಬೇಕು. ಬಲಿಯಂತೆ ನಿನ್ನನ್ನು ಬಾಗಿಲ ಕಾಯಿಸಬೇಕು. ಕುಬ್ಜೆಯಂತೆ ನಿನ್ನ ಮುಂಜೆರಗನ್ನು ಹಿಡಿದು ಗುಂಜು ಹಾಕಬೇಕು. ವಿಠಲಾ, ನಿನಗೆ ಅಂಜದೇ ಇರಬೇಕು.

ಇಷ್ಟೇ ಅಲ್ಲ; ವಿಠಲಾ! ಸುಗ್ರೀವನಂತೆ ನಿನ್ನನ್ನು ಲೆಕ್ಕಿಸದಿರಬೇಕು. ಇಂದ್ರನಂತೆ ಮಳೆಗರೆದು ಏಳುದಿನ ನಿನ್ನ ಕೈಲಿ ಗೋವರ್ಧನ ಪರ್ವತವನ್ನು ಹೊರಿಸಬೇಕು. ಪರಮ ಭಕ್ತನೆಂದೆನಿಸಿಕೊಂಡ ಪ್ರಹ್ಲಾದನಂತೆ ನಿನ್ನ ರೂಪನ್ನು ಕೆಡಿಸಬೇಕು. ವಿಠಲಾ! ನಿನಗೆ ಅಂಜದಿರಬೇಕು.

ವಿಠಲಾ! ನಾನು ಕೇಳಿದ್ದೇನೆ. ಅಂಜಿದವರಿಗೆ ನೀನು ಬ್ರಹ್ಮರಾಕ್ಷಸನಂತೆ. ಆದುದರಿಂದ, ನಾನು ನಿಜವಾಗಿಯೂ ನಿನಗೆ ಸ್ವಲ್ಪವೂ ಅಂಜುವುದಿಲ್ಲ. ನೀನೇನು ಮಹಾ ದೊಡ್ಡವನೆಂದು ನಾನು ಅಂಜಬೇಕು ? ಜಗತ್ತಿಗೆಲ್ಲಾ ನೀನು ಒಡೆಯನೆಂದೆನಿಸಿಕೊಂಡು ಹಗಲೂ ಇರುಳೂ ಪ್ರತಿದಿನವೂ ಬಲಿಯ ಮನೆಯ ಬಾಗಿಲು ಕಾಯುತ್ತಿರುವವನು ನೀನು ದೊಡ್ಡವನೋ ಬಲಿಯು ದೊಡ್ಡವನೋ ?

ಇಂದ್ರಾದಿ ದೇವತೆಗಳು ನಿನ್ನನ್ನು ದೇವ ದೇವೋತ್ತಮನೆಂದು ತಿಳಿದುಕೊಂಡಿರುವಾಗ ಪಾರ್ಥನ ರಥಕ್ಕೆ ಸಾರಥಿಯಾದ ನೀನು ದೊಡ್ಡವನೋ ?

"ಪರಬ್ರಹ್ಮ, ಪುರುಷೋತ್ತಮ" ಎಂದು ಸಕಲ ಶ್ರುತಿ ಸ್ಮೃತಿಗಳಿಂದಲೂ ಹೊಗಳಿಸಿಕೊಳ್ಳಲ್ಪಡುವ ನೀನು ಊಳಿಗದವನಂತೆ ಪಾಂಡವರು ಕರೆಕರೆದಲ್ಲಿಗೆ ಹೋಗುತ್ತಿರುವಾಗ ನಿನ್ನ ದೊಡ್ಡಸ್ತಿಕೆಯೇನು ಬಂತು ?

ವಿಠಲ ! ನಿನ್ನಲ್ಲಿ ಯಾವ ವೈಭವವಿದೆಯೆಂದು ನಾನು ನಿನಗೆ ಅಂಜಬೇಕು ? ನಿನಗೆ ದೇಶ ಕೋಶಗಳಾವುವಾದರೂ ಇದ್ದರೆ ಸಮುದ್ರದಲ್ಲಿ ಮನೆಯನ್ನು ಕಟ್ಟುತ್ತಿದ್ದೆಯಾ ? ಮಲಗುವುದಕ್ಕೆ ಹಾಸುಮಂಚವಿದ್ದರೆ, ಹಾವಿನಮೇಲೆ ಮಲಗುತ್ತಿದ್ದೆಯಾ ? ನಿನಗೆ ಬುದ್ಧಿ ಹೇಳುವ ತಂದೆ ತಾಯಿ ಇದ್ದಿದ್ದರೆ, ಗೋಕುಲದಲ್ಲೆಲ್ಲಾ ಜಾರಚೋರನೆಂದೆನಿಸಿಕೊಳ್ಳುತ್ತಿದ್ದೆಯಾ ? - ನಿನಗೊಂದು ಸರಿಯಾದ ವಾಹನಕ್ಕೇ ಗತಿಯಿಲ್ಲ. ಹಾರುವ ಹದ್ದಿನ ಮೇಲೇರಿ ತಿರುಗುತ್ತಿರುವೆ !

ವಿಠಲ ! ಇದಲ್ಲವೇ ನಿನ್ನ ವೈಭವ ! ಹೀಗಿರುವಾಗ ನಿನಗೇಕೆ ಇಷ್ಟು ಬಿಂಕ ? ಗೊತ್ತು. ನಿನ್ನ ಚರಿತ್ರೆಯು ನನಗೆ ಗೊತ್ತು. ನೀನೆಷ್ಟು ಬಿಂಕವನ್ನು ತೋರಿದರೂ ನಾನು ಬೇರೇ ನಿನ್ನನ್ನು ಬಿಡುವವನಲ್ಲ. ನೀರನ್ನು ಹೊಕ್ಕರೆ ನಾನು ಬಿಡುವೆನೆಂದು ತಿಳಿದೆಯೋ ? ಬೆನ್ನಿನ ಮೇಲೆ ಬಹಳ ಭಾರವನ್ನು ಹೊತ್ತೆನೆನ್ನುವೆಯೂ ? ಕೋರೆ ದಾಡೆಗಳನ್ನು ಮಸೆಯುತ್ತಾ ನೀನೆಷ್ಟು ಕೊಸರಿಕೊಂಡರೂ ನಾನು ಬೇರೆ ಬಿಡುವುದಿಲ್ಲ. ಘೋರ ರೂಪದಿಂದ ನೀನು ಘರ್ಜಿಸಿದರೆ ನನಗೇನು ಭಯವೇ ? ಬಡ ಹಾರುವನಂತೆ ನಾನೇ ತಿರುಪಬೇಡಿದೆನೆನ್ನುವೆಯೋ ? ಆದರೂ ಬಿಡುವುದಿಲ್ಲ. ತಾಯಿಯ ತಲೆಯನ್ನು ಕಡಿದೆನೆಂದು ಹೇಳವೆಯೋ ? ಕಾಣದಂತೆ ಹೋಗಿ ಕಾಡುಸೇರುವೆಯೋ ? ಕಾಳಿಂಗ ಮಡುವಿನಲ್ಲಿ ಧುಮ್ಮಿಕ್ಕುವೆಯಾ ? ಬತ್ತಲೆಯಾಗಿ ನಿಂತು ಕೈಯಲ್ಲಿ ಕಾಸಿಲ್ಲವೆಂದು ಹೇಳುವೆಯಾ ? ಆಹಾ,

ವಿಠಲಾ ! ಕುದುರೆಯನ್ನೇರಿ ಕೈಗೆ ಸಿಕ್ಕದಂತೆ ಓಡಿಹೋಗುವೆಯಾ ? ನೀನೇನಾದರೂ ಮಾಡು. ನನ್ನ ಮನೋಭೀಷ್ಟವನ್ನು ಕೊಟ್ಟಲ್ಲದೆ ನಾನು ಬೇರೇ ಬಿಡುವವನಲ್ಲ. ವಿಠಲಾ ! ನನ್ನನ್ನು ಕಡೆಹಾಯಿಸುವ ಭಾರವಿನ್ನಾರದು ?

ಇನ್ನೂ ನನ್ನಕೂಗು ನಿನಗೆ ಮುಟ್ಟಲಿಲ್ಲವೋ ? ವಿಠಲಾ ! ಭಕ್ತನ ನುಡಿಗಳು ಕೇಳಿಸದಂತೆ ನಿನಗೆಷ್ಟು ಮದವಿರಬಹುದು ? ವಿಠಲಾ ! ವಿಠಲಾ !

ರಾಗಾ ಕಾನಡಾ

ಆನೆಯು ಕಾಯ್ದಾಗ ಜ್ಞಾನವಿದ್ದದ್ದೇನು |
ನಾನು ವದರಲು ನೀನು ಕೇಳದಿದ್ದದ್ದೇನು |
ದಾನವಾಂತಕ ಹರಿ ದೀನರಕ್ಷಕನೆಂಬ |
ಮಾನ ಉಳಿಸಿಕೊಳ್ಳೊ ಪುರಂದರವಿಠಲಾ ||

(ಸ್ವಲ್ಪ ಹೊತ್ತು ಸುಮ್ಮನಿರುವರು)

ರಾಗಾ ಕಾಂಬೋಧಿ

ಕೃಷ್ಣಾಮೂರ್ತಿ ಕಣ್ಣಾಮುಂದೆ | ನಿಂತಿದ್ದಂತಿದೆ || ಪ ||
ಮಸ್ತಕದಲಿ ಮಾಣಿಕದ ಕಿರೀಟ |
ಕಸ್ತೂರಿ ತಿಲುಕದಿಂ ಹೊಳೆವ ಲಲಾಟ |
ಸಿಸ್ತಿನಿಂದಲಿ ಕೊಳಲನೂದುವ ಓರೆನೋಟ |
ಕೌಸ್ತುಭ ಹಾರದ ಎಡಬಲದೊಲಿದಾಟ || ೧ ||
ಮಘಮಘಿಸುವ ಸೊಬಗಿನ ಸುಳಿಗುರುಳು |
ಚಿಗುರು ತುಳಸೀವನಮಾಲೆಯು ಕೊರಳು ||
ಬಗೆಬಗೆ ಹೊನ್ನುಂಗುರವಿಟ್ಟ ಬೆರಳೂ |
ಸೊಗಸಿನ ನಾಭಿಯು ತಾವರೆಯರಳು || ೨ ||

ಉಡಿದಾರ ನವರತ್ನ ಸಕಲಾಭರಣ ।
ಬೆಡಗಿನ ಪೀತಾಂಬರ ರವಿಕಿರಣ ॥
ಕಡಗ ಕಂಕಣ ಗೆಜ್ಜೆ ಸಿಟ್ಟಿ ಚರಣ ।
ಒಡೆಯ ಶ್ರೀ ಪುರಂದರ ವಿಠಲನ ಕರುಣ ॥ ೩ ॥

(ಹೀಗೆಂದು ಸ್ತೋತ್ರಮಾಡುತ್ತಾ ಕಣ್ಣು ಮುಚ್ಚಿಕೊಳ್ಳುವರು. ವಿಠಲನು ಪ್ರತ್ಯಕ್ಷನಾಗುವನು. ಪುರಂದರದಾಸರು ಕಣ್ಣು ಬಿಟ್ಟು ಎರಡು ಕೈಗಳನ್ನೂ ಜೋಡಿಸಿಕೊಂಡು ನಿಂತು ಹಾಡುವರು.)

ರಾಗಾ ಬೇಹಾಗ್ ಆದಿತಾಳ

ದೇವಬಂದ ನಮ್ಮ ಸ್ವಾಮಿ ಬಂದನೊ ।
ದೇವರ ದೇವ ಶಿಖಾಮಣಿ ಬಂದನೊ । ॥ ಪ ॥
ಉರಗ ಶಯನ ಬಂದ । ಗರುಡಗಮನ ಬಂದ ।
ನರಗೊಲಿದವ ಬಂದ । ನಾರಾಯಣ ಬಂದನೊ ॥ ೧ ॥
ಮಂದರಧರ ಬಂದ । ಮಾಮನೋಹರ ಬಂದ ।
ಬೃಂದಾವನ ಪತಿಗೋ । ವಿಂದ ಬಂದನೊ ॥ ೨ ॥
ನಿಗಮ ಗೋಚರ ಬಂದ । ನಿತ್ಯ ತೃಪ್ತನು ಬಂದ ।
ನಗೆಮುಖಿ ಪುರಂದರ । ವಿಠಲನು ಬಂದನೂ ॥ ೩ ॥

(ಪುರಂದರ ದಾಸರು ವಿಠಲನ ಪಾದಗಳಿಗೆ ಬಿದ್ದು ನಮಸ್ಕಾರಮಾಡಿ ಪ್ರಾರ್ಥನಾಸನದಲ್ಲಿ ಕುಳಿತು ಕೊಳ್ಳುವರು.)

ಪುರಂ—(ಆನಂದ ಬಾಷ್ಪಗಳನ್ನು ಸುರಿಸುತ್ತಾ) - ವಿಠಲಾ, ನೀನೇನು ಕರುಣಾಳುವೋ! ದೋಷದೂರನಾದ ನಿನ್ನಲ್ಲಿ ನಾನು ಅತ್ಯಂತ ದೋಷಿಯಾದೆನು. ನನ್ನ ಕಠಿಣೋಕ್ತಿಗಳನ್ನು ಮನ್ನಿಸಿ ನನ್ನನ್ನುದ್ಧಾರಮಾಡಲು ಬಂದಿರುವೆಯಲ್ಲಾ! ಭಕ್ತವತ್ಸಲನೆಂಬ ಬಿರುದು ನಿನಗೆ ಸಲ್ಲುವುದರಲ್ಲಿ

ಏನೂ ಸಂದೇಹವಿಲ್ಲ! ಪರಮಾತ್ಮಾ! ದೀನಬಂಧೂ!"
ದಯಾಸಿಂಧೂ! ಜಗತ್ಪತೇ! ನನ್ನ ಅಪರಾಧಗಳನ್ನೆಣಿಸದೆ
ರಕ್ಷಿಸು! ರಕ್ಷಿಸು!

(ಎಂದು ತಲೆಯನ್ನು ಬೊಗ್ಗಿಸಿಕೊಂಡು ಕಣ್ಣೀರು ಸುರಿಸುವರು)

ವಿಠಲ—ಭಕ್ತಾಗ್ರೇಸರ!

"ಅನನ್ಯಾಶ್ಚಿಂತಯಂತೋ ಮಾಂಯೇಜನಾಃ
ಪರ್ಯುಪಾಸತೇ ||
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ
ವಹಾಮ್ಯಹಂ ||"

(ಎಂದು ಹೇಳಿಕೊಂಡು ಹೋಗುತ್ತಾ ವಿಠಲನು ಅಂತರ್ಧಾನವಾಗುವನು.)

[ಪರದೆಯು ಬೀಳುವುದು]



## ಆರನೆಯ ನೋಟ

(ಒಂದು ಬೀದಿ. ಧರ್ಮಾಧಿಕಾರಿಯು ನಿಂತಿರುವನು)

ಧರ್ಮಾ—ನಿನ್ನೆಯ ದಿನ ರಾತ್ರಿ ನನಗೆ ಎಂತಹ ಸ್ವಪ್ನವಾಯಿತು! ಏನು ಆಶ್ಚರ್ಯ! ವಿಠಲನೇ ಬಂದಿದ್ದನು. "ಪುರಂದರ ದಾಸರು ನಿರಪರಾಧಿಗಳು. ಅವರಿಗೆ ಕೊಟ್ಟಿರುವ ಶಿಕ್ಷೆಯು ಅನ್ಯಾಯವಾದುದು. ನೀನು ತಕ್ಷಣ ಹೋಗಿ ಅವರನ್ನು ಬಿಡುಗಡೆಮಾಡು" ಎಂದು ವಿಠಲನು ನನಗೆ ತಿಳಿಸಿದನು. ಇದೇನು ನಿಜವೋ? - ಇಲ್ಲವಿದ್ದರೆ ನನ್ನ ಮನಸ್ಸಿನ ಕಳವಳವೋ? ಪುರಂದರದಾಸರನ್ನು ಚಿತ್ರ

ದಿಂದ ಹೊಡೆಯುವಂತೆ ಆಜ್ಞೆಮಾಡಿರುವೆನು. ಆದರಂತೆ ನಡೆದು ಹೋಗಿರುವುದೋ ಏನೋ-ದಾಸರು ನಿರಾಪರಾಧಿಗಳಾಗಿದ್ದಲ್ಲಿ ನಾನು ಮಹಾ ಪಾಪಕಾರ್ಯ ಮಾಡಿದಂತಾಗುವುದು. ಹೇಗಾದರೂ ಇರಲಿ. ವಿಠಲನ ದೇವಸ್ಥಾನಕ್ಕೆ ಹೋಗುವೆನು. ಅಲ್ಲಿ ಎಲ್ಲಾ ಸಂಗತಿಯೂ ತಿಳಿಯುವುದು.

(ಎಂದು ಹೊರಡುವನು.)



## ಏಳನೆಯ ನೋಟ

(ವಿಠಲ ದೇವರ ದೇವಸ್ಥಾನ - ಅರ್ಚಕನು ದೇವರ ಮುಂದೆ ನಿಂತಿರುವನು. ಧರ್ಮಾಧಿಕಾರಿಯ ಪ್ರವೇಶ.)

ಧರ್ಮಾ—ಭಟ್ಟರೇ, ಈಗ ದೇವಸ್ಥಾನದಲ್ಲಿ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರುವಿರೋ ?

ಅರ್ಚ—ಸ್ವಾಮೀ, ನೋಡಿಕೊಳ್ಳುತ್ತಿರುವೆನು. ಆದರೆ, ಆ ದಿನ ತಾವು ಕೊಟ್ಟು ಹೋದ ಬಂಗಾರದ ಬಳೆಯನ್ನು ವಿಠಲ ಮೂರ್ತಿಯ ಕೈಗೆ ತೊಡಿಸಲು ಪ್ರಯತ್ನಪಟ್ಟೆನು. ಆದರೆ ಸರಹೋಗುವುದೇ ಇಲ್ಲ.

ಧರ್ಮಾ—ಈ ಬಳೆಯು ದೇವರದೋ ಅಲ್ಲವೋ ? ಚೆನ್ನಾಗಿ ನೋಡಬೇಕಾಗಿತ್ತು.

ಅರ್ಚ—ಸ್ವಾಮೀ, ಮೂರು ಹೊತ್ತೂ ಅದನ್ನೇ ಮುಟ್ಟುತ್ತಿರುವವನಿಗೆ ಅಷ್ಟು ಗೊತ್ತಿಲ್ಲವೇ? ಚೆನ್ನಾಗಿ ಪರೀಕ್ಷಿಸಿ ನೋಡಿದೆ. ಅದೇ ಕೆತ್ತನೆ! ಅದೇ ಆಕಾರ! ಅದೇ ಅಳತೆ! ಅದೇ ತೂಕ! ಅಷ್ಟಲ್ಲದೆ, ಅದೇ ಮುದ್ರೆ! ಎಳ್ಳಷ್ಟೂ ವ್ಯತ್ಯಾಸವಿಲ್ಲ. ಹೀಗಿರುವಲ್ಲಿ ಇದೇ ವಿಠಲನ ಬಳೆಯೆಂಬುದರಲ್ಲಿ ಅನುಮಾನವೇನು ಮಹಾಸ್ವಾಮೀ?

ಧ—ಹಾಗಾದರೆ, ಈಗ ನನ್ನೆದುರಿಗೆ ತೊಡಿಸಿ. ನೋಡೋಣ.

(ಅರ್ಚಕನು ಬಳೆಯನ್ನು ತೊಡಿಸಲೆತ್ನಿಸುವನು.)

ಅ—ನಿಜವಾಗಿಯೂ ಆಗುವುದಿಲ್ಲ-ಸ್ವಾಮಿ.

ಧ—ಇದೇನು, ಆಶ್ಚರ್ಯವಾಗಿದೆಯಲ್ಲಾ !

ಅ—ಸ್ವಾಮೀ, ನಿನ್ನೆಯದಿನ ಇದಕ್ಕಿಂತಲೂ ಹೆಚ್ಚಾದ ಆಶ್ಚರ್ಯದ ಸಂಗತಿಯು ನಡೆದಿರುವುದು.

ಧ—ಅದೇನು ?

ಅ—ನಿನ್ನೆಯದಿನ ನಾನು ದೇವತಾರ್ಚನೆ ಮಾಡಲು ಅಭಿಷೇಕವಾಡಿ ಅಲಂಕಾರ ಮಾಡಬೇಕೆಂದಿರುವಾಗ ನೋಡಿದರೆ ವಿಗ್ರಹದ ಮೈಮೇಲೆಲ್ಲಾ ಊದಿದಂತೆ ಬಾಚುಂಡೆಗಳು ಕಾಣಿಸಿದುವಲ್ಲದೆ ರಕ್ತವು ಧಾರೆಯಾಗಿ ಶರೀರದ ಸುತ್ತಲೂ ಸುರಿಯುತ್ತಿತ್ತು. ನಾನು ಆಶ್ಚರ್ಯಭರಿತನಾಗಿ ನೀರಿನಿಂದ ತೊಳೆದು ವಸ್ತ್ರದಿಂದ ವರಸಿದೆ. ಹಾಗೆ ಮಾಡಿದಷ್ಟೂ ರಕ್ತಧಾರೆಯು ಇನ್ನೂ ಹೆಚ್ಚುತ್ತಾ ಬಂತು.

(ಧರ್ಮಾಧಿಕಾರಿಯು ವಿಗ್ರಹದಕಡೆ ನೋಡುವನು.)

ಧ—ಭಟ್ಟರೇ, ಅಕ್ಕೋ, ಈಗಲೂ ಅದೇ ರೀತಿಯಾಗಿ ರಕ್ತಧಾರೆಯು ನಿಂತಿಲ್ಲ. ಇದೇನು ವಿಚಿತ್ರವಿರಬಹುದು ?

(ಕಾರಾಗೃಹಾಧಿಕಾರಿಯ ಪ್ರವೇಶ)

ಧ—(ಕಾ. ಅ. ಕಡೆಗೆ ತಿರುಗಿ) - ಓಹೋ, ನಿನ್ನೆ ನಾನು ಮಾಡಿದ ಆಜ್ಞೆಯನ್ನು ಸರಿಯಾಗಿ ನಡೆಯಿಸಿದಿರಾ ?

ಕಾ. ಅ.—ಮಹಾಸ್ವಾಮೀ, ತಮ್ಮ ಆಜ್ಞೆಯಂತೆ ದೊಡ್ಡ ಛಡೀಬೆತ್ತಗಳಿಂದ ಪುರಂದರದಾಸರನ್ನು ಬಹಳವಾಗಿ ಹೊಡೆದುದಾಯಿತು. ಆದರೆ—

ಧ—ಅದರೇನು ?

ಕಾ. ಅ.—ಎಷ್ಟು ಕ್ರೂರವಾಗಿ ಈ ಶಿಕ್ಷೆಯನ್ನು ಮಾಡುತ್ತಿದ್ದರೂ ಲೇಶವೂ ಯಾತನೆಯನ್ನು ಅನುಭವಿಸದವರಂತೆ ಪುರಂದರದಾಸರು ನಗುತ್ತಿದ್ದರು. ನಮಗೆ ಎಲ್ಲರಿಗೂ ಕೈಸೋತುಬಿಟ್ಟು ಬಿಟ್ಟೆವು.

ಧ—ಅಹಾ! ಆಶ್ಚರ್ಯದಮೇಲೆ ಆಶ್ಚರ್ಯವು ಕಾಣುತ್ತಿರುವುದು. ಆಗಲಿ. ಪುರಂದರದಾಸರನ್ನು ತತ್ಕ್ಷಣ ಕಾರಾಗೃಹದಿಂದ ಇಲ್ಲಿಗೆ ಕರೆದುಕೊಂಡು ಬರಬೇಕು.

(ಕಾರಾಗೃಹಾಧಿಕಾರಿಯು ಹೋಗುವನು)

ಧ—(ಮುಂದಕ್ಕೆ ಬಂದು ಆತ್ಮಗತ) - ನನ್ನ ಸ್ವಪ್ನವು ನಿಜವೆಂದು ಕಾಣುತ್ತದೆ.

(ಗ್ರಾಮವಾಸಿಗಳ ಪ್ರವೇಶ - ಒಬ್ಬೊಬ್ಬರಾಗಿ ಬಂದು ದೇವರಿಗೆ ನಮಸ್ಕಾರವನ್ನು ಹಾಕಿ ಒಂದೆಡೆ ಸಾಲಾಗಿ ನಿಂತುಕೊಳ್ಳುವರು.—ಸ್ವಲ್ಪ ಹೊತ್ತಿನಲ್ಲಿಯೇ ಪುರಂದರದಾಸರನ್ನು ಇಬ್ಬರು ಸೇವಕರು ಹಿಡಿದುಕೊಂಡು ಬರುವರು. ಕಾರಾಗೃಹಾಧಿಕಾರಿಯು ಮುಂದೆ ಬರುವನು. ಪುರಂದರದಾಸರು ಪ್ರವೇಶಮಾಡಿದೊಡನೆಯೇ ದೇವರೆದುರಿಗೆ ಕೈ ಮುಗಿದು ಕೊಂಡು ಹಾಡುವರು.)

ರಾಗಾ ಪೀಲು ಆದಿತಾಳ

ಪುರಂ—ದೇವಕಿ ಕಂದ ಮುಕುಂದ ‖ ಪ ‖

ನಿಗಮೋದ್ಧಾರ ನವನೀತ ಚೋರ ।
ಖಗಪತಿ ವಾಹನ ಜಗದೋದ್ಧಾರ ‖ ೧ ‖
ಶಂಖ ಚಕ್ರಧರ ಶ್ರೀ ಗೋವಿಂದ ।
ಪಂಕಜಲೋಚನ ಪರಮಾನಂದ ‖ ೨ ‖

ಮಕರ ಕುಂಡಲಧರ ಮೋಹನವೇಷ |
ರುಕುಮಿಣಿ ವಲ್ಲಭ ಪಾಂಡವ ಪೋಷ ‖ ೩ ‖
ಕಂಸಮರ್ದನ ಕೌಸ್ತುಭಾಭರಣ |
ಹಂಸವಾಹನ ಪೂಜಿತ ಚರಣ ‖ ೪ ‖
ವರವೇಲಾಪುರ ಚನ್ನ ಪ್ರಸನ್ನ |
ಪುರಂದರವಿಠಲ ಸಕಲಗುಣಪೂರ್ಣ ‖ ೫ ‖

(ದೇವರ ವಿಗ್ರಹದಿಂದ ಅಶರೀರವಾಣಿಯು ನುಡಿಯುವುದು.)

"ಪುರಂದರ ದಾಸರು ಯಾವ ಅಪರಾಧವನ್ನೂ ಮಾಡಿದವರಲ್ಲ ಅನೇಕ ಜನಗಳಿಗೆ ಅವರ ನಿಜವಾದ ಮಹಿಮೆಯು ಗೊತ್ತಿಲ್ಲ. ಆದುದರಿಂದ ಅದನ್ನು ಚೆನ್ನಾಗಿ ವ್ಯಕ್ತಪಡಿಸಲು ನಾನೇ ಈ ರೀತಿ ವ್ಯಾಪಾರಮಾಡಿದೆನು. ಭಂಗಾರದ ಬಳಿಯನ್ನು ರಾಧೆಗೆ ನಾನೇ ಕೊಟ್ಟೆನು. ಪುರಂದರದಾಸರು ಮಹಾ ಯೋಗಿಗಳು. ನನಗೆ ಪರಮ ಭಕ್ತರು. ಅವರಿಗೆ ಕಾರಾಗೃಹದ ಶಿಕ್ಷೆಯು ನನ್ನಿಂದ ಉಂಟಾಯಿತು. ನಾನು ಭಕ್ತಪರಾಧೀನನು. ಆದುದರಿಂದ ಪ್ರತಿಯಾಗಿ ಆ ಬಳೆಯನ್ನು ಅವರು ನನ್ನ ಕೈಗೆ ತೊಡಿಸಿ ನನ್ನನ್ನು ಬಂಧಿಸಲಿ. ಅವರ ಮಹಿಮೆಯು ಆಚಂದ್ರಾರ್ಕವಾಗಿ ಪ್ರಕಾಶಿಸುವುದು"

(ತ್ರಿವಿಕ್ರಮಪಂಡಿತರೂ, ವಿರೂಪಾಕ್ಷಶಾಸ್ತ್ರಿಗಳೂ, ರಾಮಾಚಾರ್ಯರೂ ಬಂದು ದಾಸರಿಗೆ ನಮಸ್ಕರಿಸುತ್ತಾ)

ತ್ರಿವಿಕ್ರ—ಮಹಾನುಭಾವರೇ, ನಾವು ತಮ್ಮ ವಿಷಯದಲ್ಲಿ ಮಾಡಿದ ಅಪರಾಧಕ್ಕಾಗಿ ತಾವು ಏನು ಶಿಕ್ಷೆಯನ್ನು ವಿಧಿಸಿದರೂ ಸಾಲದು. ನಮ್ಮನ್ನು ಉದ್ಧಾರಮಾಡಬೇಕೆಂದು ಬೇಡುವೆವು.

(ಎಂದು ತಲೆಬೊಗ್ಗಿಸಿ ನಿಲ್ಲುವರು.)

(ಎಲ್ಲರೂ ಆಶ್ಚರ್ಯಭರಿತರಾಗಿ ಒಬ್ಬರ ಮುಖವನ್ನು ಒಬ್ಬರು ನೋಡುವರು. ಧರ್ಮಾಧಿಕಾರಿಯು ದಾಸರ ಬಳಿಗೆ ಹೋಗಿ ಅವರ ಪಾದಗಳಿಗೆ ಬೀಳುವನು.)

ಧ--ಪರಮ ಭಗವದ್ಭಕ್ತರೇ! ನಾನು ಮಾಡಿದ ಅಪರಾಧಕ್ಕಾಗಿ ದಯವಿಟ್ಟು ನನ್ನನ್ನು ಮನ್ನಿಸಬೇಕು. ನಾನು ಕೇವಲ ಅಜ್ಞಾನಿಯು. ಪಾಪಿಯಾದ ನನ್ನನ್ನು ಮಹಾತ್ಮರು ಮನ್ನಿಸಿ ಉದ್ಧಾರ ಮಾಡಬೇಕು.

(ಪುರಂದರದಾಸರು ಆತನ ಕೈ ಹಿಡಿದು ಮೇಲಕ್ಕೆತ್ತುವರು.)

ರಾಮಾ—ವಿಠಲನೇ ದಾಸರ ವೇಷದಲ್ಲಿ ರಾಧೆಯ ಮನೆಗೆ ಹೋಗಿ ಪುನಃ ತನ್ನ ದೇವಾಲಯವನ್ನು ಹೊಕ್ಕುದನ್ನು ನಾವು ಕಂಡೆವು. ನಿರಪರಾಧಿಗಳಾದ ದಾಸರಲ್ಲಿ ದ್ವೇಷವೆಣಿಸಿದ ಪಾಮರರಾದ ನಮಗೆ ಪ್ರಾಯಶ್ಚಿತ್ತವುಂಟೇ?

ಪುರಂ—ಎಲ್ಲಾ ಸೃಷ್ಟಿಕರ್ತನಾದ ವಿಠಲನ ಲೀಲೆಯು! ಆತನ ವ್ಯಾಪಾರವನ್ನು ತಿಳಿಯಲು ಯಾರಿಂದಲೂ ಸಾಧ್ಯವಿಲ್ಲ.

## ಉಗಾಭೋಗ

ಅಣುವಾಗ ಬಲ್ಲ ಮಹತ್ತಾಗ ಬಲ್ಲ |
ಅಣುಮಹತ್ತೆರಡೊಂದಾಗ ಬಲ್ಲ ||
ರೂಪವಾಗಬಲ್ಲ | ಅರೂಪಾಗಬಲ್ಲ |
ರೂಪ ಅರೂಪ ಎರಡೊಂದಾಗ ಬಲ್ಲ ||
ವ್ಯಕ್ತನಾಗಬಲ್ಲ | ಅವ್ಯಕ್ತನಾಗಬಲ್ಲ |
ವ್ಯಕ್ತ ಅವ್ಯಕ್ತ ಎರಡೊಂದಾಗ ಬಲ್ಲ ||

ಸಗುಣನಾಗಬಲ್ಲ | ನಿರ್ಗುಣನಾಗಬಲ್ಲ |
ಸಗುಣ ನಿರ್ಗುಣ ನೆರಡೊಂದಾಗ ಬಲ್ಲ |
ಅಘಟನಾಘಟನ ಶಕ್ತ ಅಚಿಂತ್ಯಾದ್ಭುತ ಮಹಿಮ |
ಸ್ವಗತಭೇದ ವಿವರ್ಜಿತ ಪುರಂದರ ವಿಠಲಾ ||

ಎಲ್ಲರೂ— ಭಾಗವತೋತ್ತಮರೇ, ಇನ್ನಾದರೂ ನಮ್ಮೆಲ್ಲರ ಜನ್ಮಸಾರ್ಥಕವನ್ನು ಮಾಡಿಕೊಳ್ಳಲು ಹಾದಿಯನ್ನು ತೋರಿ ಅನುಗ್ರಹಿಸಿರೆಂದು ಬೇಡುವೆವು.

ಪುರಂ—

ನಾಘನ್ನ ತಾಘನ್ನ ಎನ್ನದಿರಿ |
ಘನ್ನನೊಬ್ಬನೆ ಕಾಣಿರೋ ಪುರಂದರ ವಿಠಲಾ ||
ಮನ ಚಂಚಲದಿ ತಪವ ಮಾಡಲಶಕ್ಯವು |
ಘನ ಅಜ್ಞಾನದಿ ಕೆಲವು ಕರ್ಮವು ಹತ್ತವು |
ಇನಿತಾದ್ದರಿಂದ ಪುರಂದರವಿಠಲ ಈ ಯುಗದಿ |
ನಾಮ ಸ್ಮರಣೆ ಲೇಸೆಂದನು ||

ಥ—ಮಹಾನುಭಾವರೇ, ದೈವಾಜ್ಞೆಯಂತೆ ಈ ಬಳೆಯಿಂದ ತಾವೇ ವಿಠಲನಿಗೆ ಅಲಂಕರಿಸಬೇಕು. ಅನಂತರ ಪರಮಾತ್ಮನಿಗೆ ಆರತಿಯನ್ನೆತ್ತಬಹುದು.

(ಪುರಂದರದಾಸರು ವಿಠಲನಿಗೆ ಬಳೆಯನ್ನು ತೊಡಿಸುವರು. ಅನಂತರ ಅರ್ಚಕನು ಮಂಗಳಾರತಿಯನ್ನೆತ್ತುವನು.)

(ಪುರಂದರದಾಸರು ಮಂಗಳವನ್ನು ಹಾಡುವರು.)

## ಮಂಗಳ

ರಾಗಾ ಭೈರವಿ ಅಟತಾಳ

ಜಯಮಂಗಳಂ ನಿತ್ಯ ಶುಭಮಂಗಳಂ || ಪ ||

ಇಂದೀವರಾಕ್ಷಗೆ ಇಭರಾಜವರದಗೆ |
ಇಂದಿರಾರಮಣ ಗೋವಿಂದ ಹರಿಗೆ ||
ನಂದನ-ಕಂದಗೆ ನವನೀತ ಚೋರಗೆ |
ವೃಂದಾರಕೇಂದ್ರ, ಉಡುಪಿಯ ಕೃಷ್ಣಗೆ || ೧ ||

ಕ್ಷೀರಾಬ್ಧಿವಾಸಗೆ ಕ್ಷಿತಿಜನರ ಪಾಲಗೆ |
ಮಾರನ-ಪಿತಗೆ ಮಂಗಳ ಮೂರ್ತಿಗೆ ||
ಚಾರು ಚರಣಗಳಿಂದ ಚೆಲುವಗಂಗೆಯ ಪಡೆದ |
ಕಾರುಣ್ಯಮೂರ್ತಿ ಕೌಸ್ತುಭ ಧಾರಿಗೆ || ೨ ||

ವ್ಯಾಸಾವತಾರಗೆ ವೇದ ಉದ್ಧಾರಗೆ |
ವಾಸಿತಾನಂತ ಪದ ಸಕಲೇಶಗೆ ||
ವಾಸುದೇವ-ಮೂರ್ತಿ ಪುರಂದರವಿಠಲಗೆ |
ದಾಸರ ಕಾಯ್ವ ರುಕ್ಮಿಣಿ ರಮಣಗೆ || ೩ ||

## ಮಂಗಳಂ

(ಫರದೆಯು ಬೀಳುವುದು.)

ಮೂರನೆಯ ಅಂಕವು ಮುಗಿದುದು

---

" ಪುರಂದರ ದಾಸರು " ಎಂಬ ನಾಟಕವು
ಶ್ರೀಹರಿವಾಯುಗಳ ದಯದಿಂದ ಸಂಪೂರ್ಣವು

---

|| ಶ್ರೀ ಕೃ ಷ್ಣಾ ರ್ಪ ಣ ಮ ಸ್ತು ||



# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೧ | ೩ | ಪೀಠಿಕಾಸೋಟ | ಪೀಠಿಕೆಯ ಸೋಟ |
| ,, | ೧೮ | ಭಾವಜ ಪುರುಷೋತ್ತಮ ಹರಿ | ಭಾವಜಪಿತ ಪುರುಷೋತ್ತಮ |
| ೨ | ೨೦ | ಏನು ಮಾಡದೆ | ಏನು ನೋಡದೆ |
| ೩ | ೧೨ | ತಾಂಡವ ನೃತ್ಯಹರೀ | ತಾಂಡವ ನೃತ್ಯಕರೀ |
| ೪ | ೬ | ನಾನ | ನಾನು |
| ೬ | ೧೫ | ನೊರೆ | ಪೊರೆ |
| ,, | ೨೨ | ಪಸನ್ನ | ಪ್ರಸನ್ನ |
| ೧೦ | ೧೪ | ದಿನಾಲ | ದಿನಾಲೂ |
| ೧೨ | ೧೬ | ಭುಕ್ತಿಕ್ಕೆ | ಭುಕ್ತಿಗೆ |
| ೧೩ | ೫ | ಮಾಡುವರೆಂದು | ಮಾಡುವಿರೆಂದು |
| ೧೫ | ೪-೫ | ಭಕುತಿ | ಭುಕುತಿ |
| ,, | ೧೧ | ಎಷು | ಎಷ್ಟು |
| ,, | ೧೪ | ಭವತೀ | ಭವತಿ |
| ,, | ೧೯ | ತುಳಿಸೀ | ತುಳಸೀ |
| ೧೬ | ೫ | ಗಂಟಿನ ನೆರಗಿನಲ್ಲಿ | ನೆರಗಿನ ಗಂಟಿನಲ್ಲಿ |
| ೧೮ | ೧೧ | ವಡವೆ | ಒಡವೆ |
| ೧೮ | ೨೪ | ಇದಕ್ಕೆ | ಅದಕ್ಕೆ |
| ೨೪ | ೧ | ತಮ್ಮ | ನಮ್ಮ |
| ,, | ೫ | ತಕ್ಷಣ | ತತ್ಕ್ಷಣ |
| ೨೬ | ೮ | ಮೊರೆ | ಮರೆ |
| ೨೮ | ೧೬ | ದೆತ್ಯನು | ದೈತ್ಯನು |
| ೩೦ | ೨೦ | ನೋಡಿಕೊಂದು | ನೋಡಿಕೊಂಡು |
| ,, | ೨೫ | ಪ್ರವೇಸ | ಪ್ರವೇಶ |
| ೩೧ | ೧ | ವೂರು | ಊರು |

| | | | |
|---|---|---|---|
| ೩೪ | ೧೬ | ಎಷ್ಟು | ಎಷ್ಟು |
| ೩೬ | ೬ | ಭುಂಜಿಸ | ಭುಂಜಿಸ |
| ೪೩ | ೨ | ಎಷ್ಚರಿಕೆ | ಎಚ್ಚರಿಕೆ |
| ೪೯ | ೧೪ | ಸ್ವಾಂತವ | ಸ್ವಾಂತವು |
| ,, | ೧೫ | ನಿಶ್ಚಿಂತ | ನಿಶ್ಚಿತ |
| ೫೬ | ೮ | ದಾಸರಿಗೆ | ದಾಸನಿಗೆ |
| ,, | ೧೬ | ನನಗೆ | ನಮಗೆ |
| ೬೨ | ೫ | ವಿಶಿಷ | ವಿಶಿಷ್ಟ |
| ೬೫ | ೧ | ದೇವಾ ಅಪಮೃತ್ಯು | ದೇವಾ, ನೀನು ಅಪಮೃತ್ಯು |
| ,, | ,, | ಮಾಡುವ | ಮಾಡುವೆ |
| ,, | ೨ | ನಿನ್ನದಿದೇನು ಘನತೆ? | ಅಂತಹ ನಿನ್ನದಿದೇನು ಘನತೆಯೋ ! |
| ೬೬ | ೨೬ | ವಡವೆ | ಒಡವೆ |
| ೬೮ | ೯ | ಕೃ— | ಗೋ— |
| ೮೬ | ೧೦ | ವ್ಯಾಮೋಹವನ್ನಿಟ್ಟು | ವ್ಯಾಮೋಹದಿಂದ |
| ೯೩ | ೨೧ | ಬಲಹಸ್ತಕ್ಕೆ | ಬಲದ ಹಸ್ತಕ್ಕೆ |
| ೯೬ | ೧೨ | ನಿನ್ನೆಯು | ನೆನ್ನೆಯು |
| ೧೦೦ | ೫ | ದಿನಾ | ದಿನವೂ |
| ೧೦೪ | ೧೨ | [ಪದ್ಯದ ಪಾದವೊಂದು ಬಿಟ್ಟಿದೆ] | ಪರಮ ಪಾಪಿಗಳ ಪಾಲಾಗಿಪೋದುವು. |
| ೧೦೬ | ೬ | *ಜೋರತನ | ಚೌರ್ಯ |
| ೧೦೭ | ೨೪ | ಮುಕ್ತ್ರೀಶ | ಮುಕ್ತ್ಯೀಶ |
| ೧೧೨ | ೩ | ವರಳು | ಒರಳು |
| ೧೧೨ | ೫ | ಬರೀ | ಬರಿದೆ |
| ೧೧೮ | ೨ | ತೊಡಿಸಲೆತ್ನಿಸು | ತೊಡಿಸಲು ಯತ್ನಿಸು |
| ೧೧೮ | ೮-೯ | ಅಭಿಷೇಕಕ | ಅಭಿಷೇಕ |
| ೧೧೮ | ೧೩ | ವರಸಿದೆ | ಒರಸಿದೆ |

---

*ಈ ಪದವು ಬಂದೆಡೆಯಲ್ಲೆಲ್ಲಾ ಮೇಲ್ಕಂಡಂತೆ ತಿದ್ದಿಕೊಳ್ಳಬೇಕು.